# ಮಹಾದೇವಿಯಕ್ಕನ

## ಉಜ್ವಲ ಜೀವನ




ಲೇಖಕರು

ಸ. ಶಿ. ಹಂಜಿ, ಎಂ. ಎ., ಬಿ. ಟಿ., ಡಿ. ಬಿ. ಈ.

"ಮಹಾತ್ಮಾ ಗಾಂಧಿ"ಯ ಗ್ರಂಥಕರ್ತರು.

**ಬಾಗಲಕೋಟೆ**





೧೯೫೪ ಬೆಲೆ:- ೦—೧೦—೦

ಪ್ರಥಮ ಮುದ್ರಣ ೧೯೫೨ ★ ದ್ವಿತೀಯ ಮುದ್ರಣ ೧೯೫೩



*The book is sanctioned as a Supplementary Reader by the Text Book Committee as per letter No. E T. B-922, dated 3-10-1952 of the Educational Inspetor Dha.war Division, Dha.war.*

ಪ್ರಕಾಶಕರು: ಎಸ್. ವ್ಹಿ. ಹಂಜಿ, ಬಸವೇಶ್ವರ ಟ್ರೇನಿಂಗ ಕಾಲೇಜ ಬಾಗಲಕೋಟೆ
ಮುದ್ರಕರು: ವ್ಹಿ. ಎಮ್. ಗಾರವಾಡಮಠ, ಶ್ರೀ ಶಿವಶಕ್ತಿ ಪ್ರೆಸ್, ಬಾಗಲಕೋಟೆ.

# ಮುನ್ನುಡಿ

ಶ್ರೀಯುತ ಎಸ್. ವ್ಹಿ. ಹಂಜಿ, ಇವರು ಮಹಾದೇವಿಯಕ್ಕನ ಉಕ್ತಿಗಳ ಮೇಲಿಂದ ಆಕೆಯ ಉಜ್ವಲ ಜೀವನವನ್ನು ಈ ಗ್ರಂಥದಲ್ಲಿ ಚಿತ್ರಿಸಲು ಯತ್ನಿಸಿದ್ದಾರೆ, ಭಾರತೀಯ ಧಾರ್ಮಿಕ ಪುರುಷರು ಲೌಕಿಕ ವ್ಯವಹಾರವನ್ನು ಲಕ್ಷಿಸದೆ ಅಧ್ಯಾತ್ಮಿಕ ಜೀವನಕ್ಕೆ ಮಹತ್ವ ಕೊಡುತ್ತ ಬಂದಿದ್ದಾರೆ. ಆದ್ದರಿಂದ ಅವರ ಧಾರ್ಮಿಕ ವಿಚಾರಗಳನ್ನು ಅವರು ಲಿಖಿಸಿರುವ ಸಿದ್ಧಾಂತ ಗ್ರಂಥಗಳಲ್ಲಿಯೇ ಕಾಣಬಹುದು. ೧೧ ನೇ ೧೨ನೇ ಶತಮಾನದಲ್ಲಿ ಅಸಂಖ್ಯ ಶಿವಶರಣರು ನಮ್ಮ ದೇಶದಲ್ಲಿ ಉದಯವಾದರು. ಅವರು ತಮ್ಮ ಅಧ್ಯಾತ್ಮಿಕ ನಡೆಗಳನ್ನು ಮತ್ತು ಆಚಾರ ವಿಚಾರಗಳನ್ನು ತಮ್ಮ ವಚನಗಳಲ್ಲಿಯೇ ವಿವರಿಸಿದ್ದಾರೆ. ಅವರ ವಿಚಾರ ವೈಶಿಷ್ಟ್ಯಗಳು ಅವುಗಳಲ್ಲಿಯೇ ಕಾಣಬರುತ್ತವೆ. ಆದ್ದರಿಂದ ಅವರ ಜೀವನವನ್ನು ಅವರ ವಚನಗಳಿಂದಲೇ ಕಂಡು ಹಿಡಿಯುವದು ಬಹು ಮಹತ್ವದ್ದಾಗಿರುತ್ತದೆ.

ಮಹಾದೇವಿಯಕ್ಕನು ಶಿವಶರಣರಲ್ಲಿ ಅತ್ಯುನ್ನತ ಸ್ಥಾನವನ್ನು ಪಡೆದಿದ್ದಾಳೆ. ಅವಳು ಶಿವಾನುಭವ ಮಂಟಪದಲ್ಲಿ ಎಲ್ಲ ಶಿವಾನುಭವಿಗಳಿಂದಲೂ ಮನ್ನಣೆಯನ್ನು ಹೊಂದಿದವಳಾಗಿದ್ದಳು. ಅವಳ ಶಿವಾನುಭವವು ಹೇಗಿತ್ತೆಂಬುದನ್ನು ಅವಳ ಉಕ್ತಿಗಳಲ್ಲಿಯೇ ನಾವು ಕಂಡು ಹಿಡಿಯಬಹುದಾಗಿದೆ. **ಗ್ರಂಥಕರ್ತರು ಅವಳ ಜೀವಿತದಲ್ಲಿ ಒದಗಿದ ಸನ್ನಿವೇಶನಗಳನ್ನು ಕಥಾರೂಪವಾಗಿ ಈ ಚಿಕ್ಕ ಹೊತ್ತಿಗೆಯಲ್ಲಿ ವಿವರಿಸಿದ್ದಾರೆ.** ಅವರು ಅನೇಕ ವಚನಗಳನ್ನು ಆಯ್ದು ಅವುಗಳ ಮೇಲಿಂದ ಅವಳ ಜೀವನ ಮತ್ತು ವ್ಯಕ್ತಿತ್ವ ಇವುಗಳು ಹೇಗಿದ್ದವೆಂಬುದನ್ನು ಹೇಳಿದ್ದಾರೆ. ಮನುಷ್ಯನ ಜೀವಿತ ಮತ್ತು ಅವನ ವಿಚಾರಗಳಲ್ಲಿ ಯಾವಾಗಲೂ ನಿಕಟಸಂಬಧವಿರುತ್ತದೆ. ಆದ್ದರಿಂದ ಮಹಾಪುರುಷರ ಚರಿತ್ರೆಗಳನ್ನು ಈ ಪ್ರಕಾರ ಬರೆಯಲು ಯತ್ನಿಸಿರುವದು ಎಲ್ಲರಿಗೂ ಗ್ರಾಹ್ಯವಾಗದೆ ಇರದು. ಈ ದೃಷ್ಟಿಯಿಂದ ಗ್ರಂಥಕರ್ತರು ಬರೆದ ಈ ಚರಿತ್ರೆಯ ಮಹತ್ವವು ಹೆಚ್ಚಿನದಾಗಿರುತ್ತದೆ.

ಮಹಾದೇವಿಯಕ್ಕನು ಒಂದು ಸಾಮಾನ್ಯ ಕುಟುಂಬದಲ್ಲಿ ಜನಿಸಿದವಳು. ಅವಳು ಇಚ್ಛಿಸಿದ್ದರೆ ನಾಡಿನಲ್ಲಿ ಒಂದು ಉಚ್ಚಸ್ಥಾನವನ್ನು ಹೊಂದಬಹುದಾಗಿತ್ತು; ಸುಖದಲ್ಲಿ ಲೋಲಾಡಬಹುದಾಗಿತ್ತು. ಆದರೆ ಅವಳು ಅದನ್ನು ಪ್ರೀತಿಸಲಿಲ್ಲ. ಬಹು ಕಷ್ಟತರವಾದ ಜೀವನವನ್ನು ಅವಲಂಬಿಸಿದಳು. ಆಗ ಅವಳ ಮನಸ್ಸಿನಲ್ಲಿ ಉಂಟಾದ ವಿಚಾರಗಳು ಬಹು ಅಗಾಧವಾದವುಗಳು. ಅವುಗಳನ್ನೆಲ್ಲ ಅವಳು ಕಾವ್ಯಮಯವಾಗಿ ತನ್ನ ವಚನಗಳಲ್ಲಿ ನಿರೂಪಿಸಿದ್ದಾಳೆ. ಜೀವಿತದಲ್ಲಿ ಒದಗುವ ಕಷ್ಟ ಪ್ರಸಂಗಗಳಲ್ಲಿ ಹೇಗೆ ಆನಂದಿಸಬೇಕೆಂಬುದನ್ನು ಅವಳು ಅವುಗಳಲ್ಲಿ ಹೇಳಿದ್ದಾಳೆ. ಅವಳ ಅನುಭಾವವು ಉಚ್ಚತರಗತಿಯದಾಗಿದೆ. ಇವನ್ನು ಗ್ರಂಥಕಾರರು ಬಹು ಸ್ಫುಟವಾಗಿ ಈ ಗ್ರಂಥದಲ್ಲಿ ನಿರೂಪಣೆ ಮಾಡಿದ್ದಾರೆ. ಮಹಾದೇವಿಯಕ್ಕನ ವಿಷಯವಾಗಿ ಅನೇಕ ಗ್ರಂಥಕಾರರು ಬಹು ವಿಧವಾಗಿ ವಿಮರ್ಶೆ ಮಾಡಿದ್ದಾರೆ (ಈ ಗ್ರಂಥದಲ್ಲಿ 'ಗ್ರಂಥಾವಲೋಕನ' ಈ ಶೀರ್ಷಿಕೆಯ ಕೆಳಗಿನ ಗ್ರಂಥಗಳ ಪಟ್ಟಿಯನ್ನು ನೋಡಿರಿ.) ಆದರೆ ಗ್ರಂಥಕಾರರು ಅವಳ ಜೀವನದ ವಿಮರ್ಶೆ ಮಾಡುವಲ್ಲಿ ಅವಳ ವಚನಗಳನ್ನೇ ಆಧರಿಸಿ ಅವಳ ರೀತಿ ನಡೆಗಳನ್ನು ಕಂಡು ಹಿಡಿಯಲು ಯತ್ನಿಸಿದ್ದಾರೆ. ಇದು ಹೊಸ ಬಗೆಯ ಪ್ರಯತ್ನವಾಗಿದೆ. ಇದರಲ್ಲಿ ಅವರು ಯಶಸ್ಸನ್ನು ಹೊಂದಿದ್ದಾರೆಂದು ಹೇಳಲು ಯಾವ ಪ್ರತ್ಯವಾಯವಿಲ್ಲ. ವಾಚಕರು ಅವರ ಈ ಪ್ರಯತ್ನವನ್ನು ಆದರಿಸಿ ಅದಕ್ಕೆ ಮನಗೊಡುವರೆಂದು ನೆನಿಸಿದ್ದೇನೆ.

ಗ್ರಂಥಕಾರರು ಗ್ರಂಥದಲ್ಲಿ ಪ್ರಯೋಗಿಸಿರುವ ಭಾಷೆಯು ಸುಂದರವಾದದ್ದು, ಆಹ್ಲಾದಕರವಾದದ್ದು. ಈ ಗ್ರಂಥವನ್ನು ಕನ್ನಡಿಗರು ಆದರಿಸಿ, ಗ್ರಂಥಕಾರರ ಹೊಸ ರೀತಿಯ ಪ್ರಯತ್ನವನ್ನು ಸಫಲಗೊಳಿಸುವರೆಂದು ಕೋರುತ್ತೇನೆ.

ವಿಜಾಪುರ
ತಾ. ೩೦-೧೦-೧೯೫೧

ಫ. ಗು. ಹಳಕಟ್ಟಿ
ಬಿ. ಎ., ಎಲ್. ಎಲ್. ಬಿ.
ಸಂಪಾದಕ- "ಶಿವಾನುಭವ"
ವಿಜಾಪುರ

# ನಿವೇದನ

ಮಹಾದೇವಿಯಕ್ಕನು ಶಿವಶರಣರಲ್ಲಿ ಉನ್ನತ ಸ್ಥಾನವನ್ನು ಪಡೆದವಳು. ಅಧ್ಯಾತ್ಮ ಸಾಧನೆಯಲ್ಲಿ ಅತ್ಯುಚ್ಚ ಮಟ್ಟಕ್ಕೆ ಏರಿದವಳು. ವಚನ ಸಾಹಿತ್ಯದಲ್ಲಿ—ಇಡಿಯ ಕನ್ನಡ ಸಾಹಿತ್ಯದಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಹೊಂದಿದವಳು. ಇಂತಹ ಮಹಾ ವ್ಯಕ್ತಿಯ ಜೀವನ ಚರಿತ್ರೆಯು ಇಲ್ಲಿಯ ವರೆಗೆ ಸುಪ್ತವಾಗಿತ್ತು. ಆದರೆ ಅವಳ ವಚನಗಳನ್ನು ರಾ|| ಬ|| ಹಳಕಟ್ಟಿಯವರು ತಮ್ಮ ವಿದ್ವತ್ಪರಿಶ್ರಮದಿಂದ ಪ್ರಕಟಗೊಳಿಸಿದಂದಿನಿಂದ, ವಿಶ್ವವಿದ್ಯಾಲಯದ ಉಚ್ಚತರಗತಿಯ ಪರೀಕ್ಷೆಗಳಿಗೆ ಪಠ್ಯ ಪುಸ್ತಕವೆಂದು ಹಚ್ಚಿದಂದಿನಿಂದ ಅವಳ ಜೀವನ ಚರಿತ್ರವು ಬೆಳಕಿಗೆ ಬರಹತ್ತಿತು. ಅವಳ ಜೀವನವನ್ನು ಕುರಿತು ಅನೇಕ ವಿದ್ವಾಂಸರು ವಿಮರ್ಶಕರು ಚರ್ಚೆ ಮಾಡಿ ಲೇಖನಗಳನ್ನು ಬರೆದರು. ಅವಳ ವಚನಗಳನ್ನು ಓದಿ ಸ್ಫೂರ್ತಿಗೊಂಡ ಕೆಲವರು ನಾಟಕ ಚರಿತ್ರೆಗಳನ್ನು ರಚಿಸಿದರು. ಹೀಗೆ ಸ್ಫೂರ್ತಿಹೊಂದಿದವರಲ್ಲಿ ನಾನೂ ಒಬ್ಬನು.

ಮಹಾದೇವಿಯಕ್ಕನ ವಚನಗಳನ್ನು ನಾನು ೧೯೩೪-೩೫ ರಲ್ಲಿ ಬಿ. ಎ. ಪರೀಕ್ಷೆಯ ಅಭ್ಯಾಸ ಮಾಡುವಾಗ ವಿಮರ್ಶಾತ್ಮಕ ದೃಷ್ಟಿಯಿಂದ ಪರಿಶೀಲಿಸಿದೆನು. ಅವಳ ವಚನಗಳನ್ನು ಆಕೆಯ ಜೀವನದ ಕಾಲಾನುಕ್ರಮವಾಗಿ ಹೊಂದಿಸುವ ಪ್ರಯತ್ನವೂ ನಡೆಯಿತು. ಅದರ ಫಲವಾಗಿ ನಾನು ೧೯೩೮ ರಲ್ಲಿ "ಮಹಾದೇವಿಯಕ್ಕನ ಉಜ್ವಲ ಜೀವನ" ವೆಂಬ ಚಿಕ್ಕ ಜೀವನ ಚರಿತ್ರವನ್ನು ಬರೆದೆನು. ಅದು ಶಿವಾನುಭವದಲ್ಲಿ ಪ್ರಕಟವಾಗಿದೆ. (ಅಗಸ್ಟ ೧೯೩೮) ಅದನ್ನೇ ಈಗ ಬೇರೆ ಕೆಲವು ಗ್ರಂಥಗಳನ್ನು ಅವಲೋಕಿಸಿ, ಪರಿಷ್ಕರಿಸಿ ಈಗಿನ ಚರಿತ್ರೆಯನ್ನು ರಚಿಸಿದ್ದೇನೆ.

ಈ ಗ್ರಂಥದ ಮುಖ್ಯ ಉದ್ದೇಶವು ಸಾಮಾನ್ಯಜನತೆಗೆ ಮಹಾದೇವಿಯಕ್ಕನ ವಚನಗಳ ಮುಖಾಂತರ ಆಕೆಯ ಜೀವನವನ್ನೂ, ವ್ಯಕ್ತಿತ್ವವನ್ನೂ ತಿಳಿಯಾದ ಕನ್ನಡದಲ್ಲಿ ಪರಿಚಯ ಮಾಡಿಕೊಟ್ಟು ಅವರಲ್ಲಿ ವಚನ ಸಾಹಿತ್ಯದ ಅಭ್ಯಾಸಕ್ಕೆ ಅಭಿರುಚಿಯನ್ನು ಹುಟ್ಟಿಸುವದಾಗಿರುತ್ತದೆ. ಇದಲ್ಲದೆ ಇದರಲ್ಲಿ ಕಾಲಾನುಕ್ರಮವಾಗಿ ವಚನಗಳನ್ನು ಹೊಂದಿಸಿದ್ದುದರಿಂದ ಐತಿಹಾಸಿಕ ಸಂಶೋಧಕರಿಗೂ ಇದು ಸ್ವಲ್ಪವಾದರೂ ನೆರವಾಗುವದೆಂಬ ಆಶೆಯಿದೆ. ಆದುದರಿಂದ ಇದರಲ್ಲಿ ಅವಳ

ಕಾಲಮಾನ, ವಿವಾಹ, ಅಧ್ಯಾತ್ಮ ಸಾಧನೆಯ ಪ್ರಗತಿ ಮೊದಲಾದವು ಗಳನ್ನು ಚರ್ಚಿಸುವ ವಿವೇಚನೆಯು ಬಂದಿಲ್ಲ. **ಮಹಾದೇವಿಯಕ್ಕನು ಪರಮಾತ್ಮನ ಮೇಲಿನ ಅಪಾರವಾದ ನಿಷ್ಠೆಯಿಂದ** ಜೀವನದ ಎಡರು ತೊಡರುಗಳನ್ನು ದಾಟಿದ ಮಹಾ ತಪಸ್ವಿನಿಯು. ಅವಳು ಬಹಿ ರಂಗದಲ್ಲಿ ರೂಪ ಯೌವನಶಾಲಿನಿಯು, ತೇಜಸ್ವಿನಿಯು; ಆದರೆ ಅಂತ ರಂಗದಲ್ಲಿ ಅವಳು ತಪಸ್ವಿನಿಯು, ವೀರ ವೀರಾಗಿಣಿಯು, ಗುಣಶೀಲ ಸಂಪನ್ನೆಯು. ಅವಳ ಜೀವನವೆಂಬುದು ಒಂದು ಕಾವ್ಯ. ಅವಳ ಇಡಿಯ ಜೀವನವೆಲ್ಲ ಆಕೆಯ ಕಾವ್ಯಮಯವಾದ ವಚನಗಳಿಂದ ಪ್ರವಹಿ ಸುತ್ತದೆ. ನನ್ನ ಮನೋಭಾವದಲ್ಲಿ ರೂಪುಗೊಂಡ ಮಹಾದೇವಿಯಕ್ಕನ ಚಿತ್ರವು ಇಂತಹದು.

ಸಹೃದಯರಾದ ಕನ್ನಡಿಗರು ಈ ಚಿಕ್ಕ ಗ್ರಂಥವನ್ನು ಆದರದಿಂದ ಬರಮಾಡಿಕೊಳ್ಳುವರೆಂದು ಬಲವಾದ ಆಶೆಯಿದೆ. ಏನಾದರೂ ಸಲಹೆ ಸೂಚನೆಗಳಿದ್ದರೆ ಕೃತಜ್ಞತೆಯಿಂದ ಸ್ವೀಕರಿಸಿ ತಿದ್ದಲನುವಾಗುವದು.

ಈ ಚಿಕ್ಕ ಹೊತ್ತಿಗೆಯನ್ನು ಓದಿ ಮುನ್ನುಡಿಯನ್ನು ಬರೆದುಕೊಟ್ಟು ನನಗೆ ಪ್ರೋತ್ಸಾಹವನ್ನಿತ್ತ, ಕನ್ನಡ ಸಾಹಿತ್ಯದ- ಮುಖ್ಯವಾಗಿ ವಚನ ಸಾಹಿತ್ಯದ ಪುನರುದ್ಧಾರದ ಕಾರ್ಯಕ್ಕೆ ತಮ್ಮ ಇಡಿಯ ಜೀವಮಾನ ವನ್ನೇ ಅರ್ಪಣಮಾಡಿದ, ಕನ್ನಡ ನಾಡು, ನುಡಿಗಳ ಅಭಿಮಾನ ಧನರೂ, ಪೂಜ್ಯ ಹಿರಿಯರೂ ಆದ ವಚನ ಶಾಸ್ತ್ರ ಪಿತಾಮಹ **ರಾ|| ಬ|| ಫ. ಗು. ಹಳಕಟ್ಟಿಯವರಿಗೆ** ನನ್ನ ಕೃತಜ್ಞತೆಯನ್ನು ಸಲ್ಲಿ ಸುವೆನು. ಈ ಕೃತಿಯನ್ನು ವಿರಚಿಸಲು ನೆರವಾದ ಅಕ್ಕನ ಸಾಹಿತ್ಯದ ಗ್ರಂಥಕರ್ತರೆಲ್ಲರಿಗೂ ನಾನು ಚಿರಋಣಿ.

## ಎರಡನೆಯ ಮುದ್ರಣ

ಸಹೃದಯರಾದ ಕನ್ನಡಿಗರು ಈ ಚಿಕ್ಕ ಗ್ರಂಥವನ್ನು ಪ್ರೇಮ ದಿಂದ ಸ್ವಾಗತಿಸಿ ಪ್ರೋತ್ಸಾಹಿಸಿದ್ದುದರಿಂದ ಈ ಮುದ್ರಣವನ್ನು ಹೊರ ಡಿಸಲಾಗಿದೆ. ಇದರಲ್ಲಿ ಕೆಲವು ವಚನಗಳನ್ನು ಅರ್ಥವು ಸರಿ ಯಾಗುವಂತೆ ತಿದ್ದಲಾಗಿದೆ. ಈ ಕಾರ್ಯದಲ್ಲಿ ನೆರವಾದ **ಪ್ರೊ. ಎಂ. ಎಸ್. ಸುಂಕಾಪುರ** ಎಂ. ಎ. ಅವರಿಗೆ ನನ್ನ ಧನ್ಯವಾದಗಳು.

**ಬಾಗಲಕೋಟ** ತಾ. ೧೦-೮-೧೯೫೩ **ಸ. ಶಿ. ಹಂಜಿ**

★ ಪೂಜ್ಯ ತಾಯಿ ನೀಲಮ್ಮನವರ ★

**ಚರಣಕಮಲಗಳಿಗೆ-**

## ಪರಿವಿಡಿ





# ಮಹಾದೇವಿಯಕ್ಕನ ಉಜ್ವಲ ಜೀವನ



## ೧. ಆರಂಭದ ಜೀವನ

ಮಹಾದೇವಿಯಕ್ಕನು ಭರತಖಂಡದ ಸಾಧ್ವೀ ಶಿರೋಮಣಿಗಳಲ್ಲಿ ಶ್ರೇಷ್ಠಳು. ಅವಳು ಸಾಮಾನ್ಯ ಮನೆತನದಲ್ಲಿ ಹುಟ್ಟಿದರೂ ತನ್ನ ಅಸಾಮಾನ್ಯ ಉಜ್ವಲ ಮತ್ತು ದಿವ್ಯ ಚರಿತ್ರದಿಂದ ಕೇವಲ ಕನ್ನಡಿಗರಷ್ಟೇ ಅಲ್ಲದೆ ಇಡಿಯ ಭರತಭೂಮಿಗೂ ಹಾಗೂ ಸಕಲ ಮಾನವ ಜನಾಂಗಕ್ಕೂ ಆದರ್ಶಪ್ರಾಯಳಾಗಿರುತ್ತಾಳೆ.

ಮಹಾದೇವಿಯಕ್ಕನು ಕನ್ನಡ ನಾಡಿನಲ್ಲಿ ಉಡುತಡಿಯೆಂಬ ಗ್ರಾಮದಲ್ಲಿ ಒಬ್ಬ ಶಿವಭಕ್ತನ ಮನೆತನದಲ್ಲಿ ಜನಿಸಿದಳು. ಅವಳ ತಾಯಿಯ ಹೆಸರು **ಸುಮತಿ.** ತಂದೆಯ ಹೆಸರು **ನಿರ್ಮಲ.** ಅವರು ಬಡವರಾಗಿದ್ದರೂ ಸದಾಚಾರ ಸಂಪನ್ನರಾಗಿ ಅನ್ಯರ ಗೊಡವೆಗೆ ಹೋಗದೆ ಯಾವಾಗಲೂ ಸತ್ಕೃತ್ಯಗಳನ್ನು ಮಾಡುತ್ತ ಇದ್ದುದರಲ್ಲಿಯೇ ಸಮಾಧಾನದಿಂದ ಜೀವಿಸುತ್ತಿದ್ದರು. ಇಂತಹ ತಾಯಿ-ತಂದೆಗಳ ಪ್ರಭಾವದಿಂದ ಮಹಾದೇವಿಯಕ್ಕನು ಚಿಕ್ಕಂದಿನಿಂದಲೇ ಯೋಗ್ಯ ಶಿಕ್ಷಣವನ್ನು ಪಡೆಯುತ್ತ ಬಂದಳು. ಅವರು ತಮ್ಮ ಸಹಜವಾದ ಪ್ರೇಮದಿಂದ ಆಕೆಯನ್ನು ಬಹಳ ಜಾಗರೂಕತೆಯಿಂದ ಜೋಪಾನ ಮಾಡಿ ಒಳ್ಳೆಯ ಸದ್ಗುಣ ಸಂಪನ್ನಳನ್ನಾಗಿ ಮಾಡಿದರು. ಅವಳಾದರೂ ಅವರು ಹೇಳಿದ ನೀತಿಯ ನುಡಿಗಳನ್ನು ಪ್ರೇಮದಿಂದ ಕೇಳಿ ಸದಾಚಾರದಿಂದ ನಡೆಯುತ್ತಿದ್ದಳು. ಹೀಗೆ ಅವಳ ಬಾಲ್ಯ ಜೀವನವು ಮುಂದೆ ಅವಳು ಆಚರಿಸಿದ ಉಜ್ವಲವಾದ ಜೀವನಕ್ಕೆ ತಳಹದಿಯಾಯಿತೆಂದು ಹೇಳಬಹುದು.

ಅವಳ ಬಾಲ್ಯವನ್ನು ಹರಿಹರ ಮಹಾಕವಿಯು ಹೀಗೆ ಸೊಗಸಾಗಿ ವರ್ಣಿಸಿರುವನು—

"ತಾಯ ಮಗ್ಗುಲ ತಂಪಿನೊಳುಂ ಮೊಲೆವಾಲಿಂಪಿನೊಳುಂ
ತೊಟ್ಟಿಲ ತೂಕದೊಳುಂ ರಾಗಿಸುವರ ಜೋಗುಳದೊಳುಂ
ಸಾಗಿಸುವರ ಸೋಗಿಲೊಳಂ ಎತ್ತಿಕೊಂಬರಳ್ತಿಯೊಳಂ
ಮುಟ್ಟುವರ ಮೋಹದೊಳಂ ಸೋಕುವರ ಸುಖದೊಳಂ
ತಕ್ಕೈಸುವರಪ್ಪಿನೊಳಂ ಶಶಿಕಳೆಯಂತೆ ದಿನದಿನಕೆ ಕಳೆ
ಯೇರೆ ನಳನಳಿಸಿ ಬೆಳಗುತಿರ್ಪ ಮಹಾದೇವಿಯಕ್ಕಂ,
ಉತ್ಪಳದೊಳು ಸಿಲ್ಕಿದ ಪೆಣ್ದುಂಬಿ ಜಿನುಗುವಂತೆ
ಒಮ್ಮೊಮ್ಮೆಯಳುತ್ತಂ ಕಮಲಕುಟ್ಮಲವರಳ್ವಂತೆ ನಗುತ್ತಂ
ಕುಮುದಂ ಮುಗಿವಂತೆ ಕಣ್ಮುಚ್ಚುತ್ತಂ ಶಿವಭಕ್ತಿಯ
ಮುಚ್ಚಳಂದೆಗೆವಂತೆ ಕಣ್ದೆರೆವುತ್ತಂ ಮಂದಾನಿಲನಂ
ಸೋಂಕಿದೆಳಲತೆಯಲುಗುವಂತೆ ತೋಳಾಡಿಸುತ್ತಂ
ಜೀವರತ್ನವೇಳುವಂತೆ ಅಂಬಳಿಕ್ಕುತಂ ನಿಷ್ಠೆನಿಮಿರ್ವಂತೆ
ನಿಂದಿರುತ್ತಂ ಸುಖಂ ಸುಳಿವಂತೆ ನಡೆಗಲಿವುತ್ತಂ
ಅರಳೆಲೆಯ ಸಿರಿವಂತೆ ಸೂಸರದ ಸುಮ್ಮಾನಿ ಭಸಿತದಭಾವಕಿ
ಅಂಜನದ ರಂಜನೆ ಮಾಗಾಯ ಮುಗುದೆ ಹೊನ್ನೋಲೆಯ
ಚೆನ್ನೆ ಮೂಕುತಿಯ ಮುಗುಳು ಪುಲಿಯುಗರ ಸುಲಲಿತೆ
ನೇವಣದ ನೀರೆ ರತ್ನದಾಳಿಯ ರಾಜಹಂಸೆ ತೋಳಬಂದಿಯ
ಬಾಳಕಿ ಹೊಂಗಡದ ಲಿಂಗವಂತೆ ಕಂಕಣದ ಕಾಮಧೇನು
ತೊಡಿಗೆಯ ಬೆಡಂಗಿ ಅಂದುಗೆಯ ಮಂದಯಾನೆ ಗೆಜ್ಜೆ
ಗಳ ಸಜ್ಜನೆ ಎನಿಸಿ ನಳನಳಿಸಿ ಬಳೆಯುತುಮಿತರದೊಳು... ..

ಹೀಗೆ ಅವಳು ತನ್ನ ಪ್ರೇಮದ ತಾಯಿ-ತಂದೆಗಳ ಮುದ್ದಿಗೀಡಾಗಿ ಶೈಶವಾವಸ್ಥೆಯನ್ನು ಸುಖದಿಂದ ಕಳೆಯಲು ಆಕೆಗೆ ನೂತನ ತಾರುಣ್ಯ ಒದಗಿತು. ಮೊದಲೇ ಅವಳು ಸಹಜ ಸೌಂದರ್ಯಸಂಪನ್ನಳು. ಯೌವನಾವಸ್ಥೆಯಲ್ಲಿ ಕಾಲಿಟ್ಟಕೂಡಲೇ ಪುಟಕ್ಕೆ ಹಾಕಿದ ಚಿನ್ನದಂತೆ ಅವಳ ಸೌಂದರ್ಯವು ಹೆಚ್ಚುತ್ತ ನಡೆಯಿತು. ಅವಳು ಸದಾಚಾರ ಸಂಪನ್ನರಾದ ಶಿವಭಕ್ತರ ಮನೆಯಲ್ಲಿ ಬೆಳೆದವಳು, ಯೋಗ್ಯ ಶಿಕ್ಷಣವನ್ನು ಪಡೆದವಳು, ಗುಣಶೀಲಸಂಪನ್ನಳು. ಹೀಗೆ ಅವಳು ಗುಣರೂಪಶೀಲ ಸಂಪನ್ನಳಾದಳು. ಮಗಳು ದೊಡ್ಡವಳಾದುದರಿಂದ ಅವಳ ತಾಯಿ ತಂದೆಗಳಿಗೆ ಆಕೆಯ ವಿವಾಹದ ಚಿಂತೆಯು ಪ್ರಾರಂಭವಾಯಿತು ಆದರೆ

ಮಹಾದೇವಿಯಕ್ಕನು ಅದರ ವಿಚಾರವನ್ನು ಕನಸುಮನಸಿನಲ್ಲಿಯೂ ಮಾಡಿದ್ದಿಲ್ಲ. ಅವಳು ಯಾವಾಗಲೂ ಶಿವಧ್ಯಾನ, ತಾಯಿತಂದೆಗಳ ಸೇವೆ, ಅತಿಥಿಗಳ ಸೇವೆ ಮೊದಲಾದ ಸತ್ಕಾರ್ಯಗಳಲ್ಲಿ ತೊಡಗುತ್ತಿದ್ದಳು.

ಮಹಾದೇವಿಯಕ್ಕನು ತಂದೆ ತಾಯಿಗಳ ಬಳಿಯಲ್ಲಿಯೇ ವಿದ್ಯಾಭ್ಯಾಸ ಮಾಡಿ ಕನ್ನಡ ಸಂಸ್ಕೃತ ಭಾಷೆಗಳಲ್ಲಿ ಪರಿಣತಳಾದಳು. ಅವಳು ಸರಸವಾಗಿ ಮಾತನಾಡಲೂ ಬರೆಯಲೂ ಜಾಣಳಾದಳು. ಅವಳು ಮನೆಯಲ್ಲಿ ತಾಯಿಯ ಸಂಗಡ ಮನೆಗೆಲಸಗಳಲ್ಲಿ ನೆರವಾಗಿ ಉಳಿದ ವೇಳೆಯನ್ನು ಶಿವಧ್ಯಾನ, ಶಿವಪೂಜೆ, ಧಾರ್ಮಿಕ ಗ್ರಂಥಗಳ ಪರಿಶೀಲನೆಗಳಲ್ಲಿ ವಿನಿಯೋಗಿಸುತ್ತಿದ್ದಳು. ಅವಳು ಊರಲ್ಲಿಯ ಚನ್ನಮಲ್ಲಿಕಾರ್ಜುನ ದೇವಾಲಯಕ್ಕೆ ತನ್ನ ತಾಯಿಯ ಕೂಡ ಪ್ರತಿನಿತ್ಯ ಹೋಗಿ ಅವನ ಧ್ಯಾನದಲ್ಲಿ ಪರವಶಳಾಗುತ್ತಿದ್ದಳು. ಅವಳು ಪ್ರತಿದಿನ ತ್ರಿಕಾಲ ಲಿಂಗ ಪೂಜೆಯನ್ನು ಮಾಡುತ್ತಿದ್ದಳು.

೧. "ಉದಯದಲೆದ್ದು ನಿಮ್ಮ ನೆನೆವೆನಯ್ಯ. ನಿಮ್ಮ ಬರವ ಹಾರುತ್ತಿರ್ಪೆನಯ್ಯ! ಹಸೆ ಹಂದರವನಿಕ್ಕಿ, ನಿಮ್ಮಡಿಗೆಡೆಮಾಡಿಕೊಂಡಿಪ್ಪೆನಯ್ಯ ಚನ್ನಮಲ್ಲಿಕಾರ್ಜುನಾ, ನೀನಾವಾಗ ಬಂದಿಹೆ ಎಂದು."

ಈ ಪ್ರಕಾರ ಅವಳು ಪರಮಾತ್ಮನ ಆಗಮನದ ದಾರೀ ಕಾಯುತ್ತಿದ್ದಳು.

ಅವಳು ಗುರು ಜಂಗಮರ ಸೇವೆಯನ್ನು ಒಳ್ಳೆಯ ಭಕ್ತಿಪೂರ್ವಕವಾಗಿ ಮಾಡುತ್ತಿದ್ದಳು. ಇದನ್ನು ಅವಳ ಕೆಳಗಿನ ವಚನದಲ್ಲಿ ಕಾಣಬಹುದು.

೨, "ನಾನು ಮಜ್ಜನವ ಮಾಡುವದಕ್ಕೆ ಮುನ್ನವೆ, ಜಂಗಮಕ್ಕೆ ಮಜ್ಜನವ ಮಾಡಿಸುವೆ. ನಾನು ಸೀರೆಯನುಡುವುದಕ್ಕೆ ಮುನ್ನವೆ, ಜಂಗಮಕ್ಕೆ ದೇವಾಂಗವ ನುಡಿಸುವೆ, ನಾನು ಪರಿಮಳವ ಲೇಪಿಸುವದಕ್ಕೆ ಮುನ್ನವೆ, ಜಂಗಮಕ್ಕೆ ಸುಗಂಧ ದ್ರವ್ಯಂಗಳ ಲೇಪಿಸುವೆ. ನಾನು ಅಕ್ಷತೆಯನಿಡುವದಕ್ಕೆ ಮುನ್ನವೆ, ಜಂಗಮಕ್ಕೆ ಅಕ್ಷತೆಯನಿಡುವೆ. ನಾನು ಪುಷ್ಪವ ಮುಡಿವುದಕ್ಕೆ ಮುನ್ನವೆ ಜಂಗಮಕ್ಕೆ ಪರಿಮಳ

ಪುಷ್ಪವ ಮುಡಿಸುವೆ. ನಾನು ಧೂಪ ವಾಸನೆಯ ಕೊಳ್ಳದ ಮುನ್ನವೆ ಜಂಗಮಕ್ಕೆ ಧೂಪವಾಸನೆಯ ಕೊಡುವೆ. ನಾನು ದೀಪಾರತಿಯ ನೋಡದ ಮುನ್ನವೆ ಜಂಗಮಕ್ಕೆ ಆರತಿಯನೋಡಿಸುವೆ. ನಾನು ಸಕಲ ಪದಾರ್ಥವ ಸ್ವೀಕರಿಸುವ ಮುನ್ನವೆ ಜಂಗಮಕ್ಕೆ ಮೃಷ್ಟಾನ್ನವ ನೀಡುವೆ. ನಾನು ಪಾನಂಗಳ ಕೊಳ್ಳದ ಮುನ್ನವೆ, ಜಂಗಮಕ್ಕೆ ಅಮೃತ ಪಾನಂಗಳ ಕೊಡುವೆ. ನಾನು ಕೈದೊಳೆಯದ ಮುನ್ನವೆ, ಜಂಗಮಕ್ಕೆ ಹಸ್ತಪ್ರಕ್ಷಾಳನವ ಮಾಡಿಸುವೆ. ನಾನು ವೀಳೆಯವ ಮಾಡುವದಕ್ಕೆ ಮುನ್ನವೆ ಜಂಗಮಕ್ಕೆ ತಾಂಬೂಲವ ಕೊಡುವೆ. ನಾನು ಗದ್ದುಗೆಯ ಮೇಲೆ ಕುಳ್ಳಿರುವದಕ್ಕೆ ಮುನ್ನವೆ, ಜಂಗಮಕ್ಕೆ ಉನ್ನತಾಸನವನಿಕ್ಕುವೆ. ನಾನು ಸುನಾದಂಗಳ ಕೇಳುವದಕ್ಕೆ ಮುನ್ನವೆ, ಜಂಗಮಕ್ಕೆ ಸಂಗೀತ ವಾದ್ಯಂಗಳ ಕೇಳಿಸುವೆ, ನಾನು ಭೂಷಣಗಳ ತೊಡುವದಕ್ಕೆ ಮುನ್ನವೆ, ಜಂಗಮಕ್ಕೆ ಆಭರಣಂಗಳ ತೊಡಿಸುವೆ. ವಾಹನಂಗಳನೇರುವದಕ್ಕೆ ಮುನ್ನವೆ ಜಂಗಮಕ್ಕೆ ವಾಹನಂಗಳ ನೇರಿಸುವೆ. ಇಂತೀ ಹದಿನಾರು ತೆರದ ಭಕ್ತಿಯನು ಚರಲಿಂಗಕ್ಕೆ ಕೊಟ್ಟು, ಆ ಚರಲಿಂಗ ಮೂರ್ತಿ ಭೋಗಿಸಿದ ಬಳಿಕ ನಾನು ಪ್ರಸಾದ ಮುಂತಾಗಿ ಭೋಗಿಸುವೆನಲ್ಲದೆ, ಜಂಗಮವಿಲ್ಲದೆ ಇನಿತರೊಳಗೊಂದು ಭೋಗವನಾದಡೂ ನಾನು ಭೋಗಿಸಿದೆನಾದೊಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಇಂತೀ ಕ್ರಮದಲ್ಲಿ ನಡೆದಾತಂಗೆ ಗುರುವುಂಟು, ಲಿಂಗವುಂಟು, ಜಂಗಮವುಂಟು, ಪಾದೋದಕವುಂಟು, ಪ್ರಸಾದವುಂಟು, ಆಚಾರವುಂಟು, ಭಕ್ತಿಯುಂಟು. ಈ ಕ್ರಮದಲ್ಲಿ ನಡೆಯದಾತಂಗೆ ಗುರುವಿಲ್ಲ, ಲಿಂಗವಿಲ್ಲ, ಜಂಗಮವಿಲ್ಲ, ಪಾದೋದಕವಿಲ್ಲ, ಪ್ರಸಾದವಿಲ್ಲ; ಆಚಾರವಿಲ್ಲ, ಸದ್ಭಕ್ತಿಯಿಲ್ಲ, ಅವನ ಬಾಳುವೆ ಹಂದಿಯ ಬಾಳುವೆ; ಅವನ ಬಾಳುವೆ ನಾಯಿ ಬಾಳುವೆ; ಅವನ ಬಾಳುವೆ ಕತ್ತೆಯ ಬಾಳುವೆ; ಅವನು ಸುರೆಮಾಂಸ ಭುಂಜಕನು; ಅವನು ಸರ್ವಚಾಂಡಾಲನಯ್ಯಾ ಚನ್ನಮಲ್ಲಿಕಾರ್ಜುನಾ."

ಈ ಪ್ರಕಾರ ಜೀವನವನ್ನು ಸಾಗಿಸುತ್ತಿರುವಾಗ ಒಂದು ದಿನ ಒಂದು ವಿಚಿತ್ರ ಸಂಗತಿಯು ಒದಗಿತು. ಅದೇ ಗ್ರಾಮದಲ್ಲಿ ಕೌಶಿಕನೆಂಬ ಜೈನ ಅರಸನು ವಾಸಿಸುತ್ತಿದ್ದನು. ಅವನು ಒಂದು ದಿನ ಬೇಟೆಯಾಡಿ ಒಳ್ಳೆಯ ವೈಭವದಿಂದ ಮೆರವಣಿಗೆಯೊಡನೆ ಊರೊಳಗೆ ಬರುತ್ತಿದ್ದನು. ಅಕಸ್ಮಾತ್ತಾಗಿ ಗೆಳೆಯರ ಸಂಗಡ ಮೆರವಣಿಗೆಯನ್ನು ನೋಡುತ್ತ ನಿಂತಿದ್ದ ಲೋಕೋತ್ತರ ಲಾವಣ್ಯಯುಕ್ತಳಾದ ಮಹಾದೇವಿಯಕ್ಕನನ್ನು ಕಂಡು ಪ್ರಥಮ ಸಂದರ್ಶನದಲ್ಲಿಯೇ ಆಕೆಯ ಸೌಂದರ್ಯಕ್ಕೆ ಮೆಚ್ಚಿ ಅವಳಲ್ಲಿ ಪ್ರೇಮಭಾವವುಳ್ಳವನಾದನು. ಅವನು ಆ ಊರಿನ ಒಡೆಯ

ನಾದುದರಿಂದ ಅವನಿಗೆ ತನ್ನ ಬಯಕೆಯನ್ನು ಸಾಧಿಸುವದು ಅಸಾಧ್ಯ ವೆಂದೆನಿಸಲಿಲ್ಲ. ಆದುದರಿಂದ ಅವನು ಮಹಾದೇವಿಯಕ್ಕನನ್ನು ಮದುವೆ ಯಾಗಿಯೇತೀರಬೇಕೆಂದು ಆತುರನಾಗಿ ಆಕೆಯ ತಾಯಿ ತಂದೆಗಳ ಹತ್ತಿರ ತನ್ನ ಮಂತ್ರಿಯನ್ನು ಕಳಿಸಿದನು. ಅಕಸ್ಮಾತ್ತಾಗಿ ಮನೆಗೆ ಬಂದ ಅವರನ್ನು ನಿರ್ಮಲನು ಆದರಸತ್ಕಾರ ಮಾಡಿ ಕುಳ್ಳಿರಿಸಿ ಬಂದ ಕಾರಣವನ್ನು ಕೇಳಿದನು. ಆಗ ಮಂತ್ರಿಯು ಅರಸನ ಮನಸ್ಸಿನ ಪರಿಸ್ಥಿತಿಯನ್ನೂ ರಾಜಸಂಬಂಧದಿಂದಾಗುವ ಲಾಭಗಳನ್ನೂ ವರ್ಣಿಸಿ ಹೇಳಿದನು. ಆದರೆ ಶಿವಭಕ್ತನಾದ ನಿರ್ಮಲನು ಭವಿಯಾದ ಅರಸನಿಗೆ ಮಗಳನ್ನು ಕೊಡುವದು ಸಾಧ್ಯವಿಲ್ಲವೆಂದೂ, ಅದು ಧರ್ಮ ವಿರುದ್ಧ ವಾಗುವದೆಂದೂ ತಿಳಿಸಿದನು. ಆಗ ಮಂತ್ರಿಯು ತನಗೆ ಈ ಚರ್ಚೆಯು ಬೇಡವೆಂದೂ, ರಾಜಾಜ್ಞೆಯನ್ನು ಮನ್ನಿಸಬೇಕೆಂದೂ ಬಿನ್ನವಿಸಿದನು. ಆಗ ನಿರ್ಮಲನು ಈ ವಿಷಯದ ಬಗ್ಗೆ ತನ್ನ ಹೆಂಡತಿಯನ್ನೂ ಪ್ರಬುದ್ಧಳಾದ ಮಗಳನ್ನೂ ವಿಚಾರಿಸಿ ತಿಳಿಸುವೆನೆಂದು ಮಂತ್ರಿಗೆ ಹೋಗಲು ಹೇಳಿದನು. ಮಂತ್ರಿಯು ತಾನು ತಂದ ಉಡುಗರೆಗಳನ್ನು ಅವರಿಗೆ ಅರ್ಪಿಸಿ ಅರಮನೆಗೆ ನಡೆದನು.

ಈ ಮೊದಲೇ ಮಹಾದೇವಿಯಕ್ಕನ ವಿವಾಹದ ಬಗೆಗೆ ಚಿಂತಿಸುತ್ತಿದ್ದ ಸುಮತಿ, ನಿರ್ಮಲರಿಗೆ ಈಗ ಹೆಚ್ಚಿನ ಸಂಕಟವುಂಟಾಯಿತು. ಭವಿಯಾದ ಅರಸನ ಕೂಡ ಶರೀರಸಂಬಂಧ ಮಾಡುವದು ಅವರ ಮನಸ್ಸಿಗೆ ಎಳ್ಳಷ್ಟೂ ಬರಲಿಲ್ಲ. ಇನ್ನು ಆ ವಿಷಯದ ಬಗೆಗೆ ಮಗಳನ್ನು ಕೇಳಬೇಕೆಂದು, ಸುಮತಿಯು ಅವಳನ್ನು ಏಕಾಂತದಲ್ಲಿ ಕರೆದು ಈ ವರೆಗೆ ನಡೆದ ಎಲ್ಲ ಸಂಗತಿಯನ್ನು ವಿವರಿಸಿದಳು. ಆದರೆ ಯಾವಾಗಲೂ ಶಿವ ಧ್ಯಾನ, ಮಲ್ಲಿಕಾರ್ಜುನ ಧ್ಯಾನಗಳಲ್ಲಿ ಮಗ್ನಳಾದ ಮಹಾದೇವಿಯಕ್ಕನು ಅದನ್ನೆಲ್ಲ ಕೇಳಿ ಆಶ್ಚರ್ಯಚಕಿತಳಾದಳು. ಆಗ ಅವಳು ತನ್ನ ತಾಯಿಗೆ ಶಿವನೇ ತನ್ನ ಪ್ರಿಯನು ಅವನನ್ನು ಬಿಟ್ಟು ಇರಲಾರೆನೆಂದು ಹೀಗೆ ಹೇಳುವಳು.

೩. ಎನ್ನ ಮನವ ಮಾರುಗೊಂಡನವ್ವಾ! ಎನ್ನ ತನುವ ಸೂರೆಗೊಂಡನವ್ವಾ! ಎನ್ನ ಸುಖವನೊಪ್ಪಗೊಂಡನವ್ವಾ! ಎನ್ನಿರವನಿಂಬುಗೊಂಡನವ್ವಾ ಚನ್ನಮಲ್ಲಿಕಾರ್ಜುನನ ಒಲುವೆಯವಳಾನು"

ಆಗ ಅವಳ ತಾಯಿಯು ಅವಳಿಗೆ ಪರಮಾತ್ಮನನ್ನು ವರಿಸುವೆನೆಂಬ ಹುಚ್ಚು ಕಲ್ಪನೆಯನ್ನು ಬಿಡಬೇಕೆಂದು ಹೇಳಿದಳು. ಆಗ ಅಕ್ಕನು—

೪. "ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ, ಚಲವಂಗಾನೊಲಿದೆನವ್ವ. ಎಡೆ ಇಲ್ಲದ ಕಡೆಯಿಲ್ಲದ ತೆರಹಿಲ್ಲದ ಕುರುಹಿಲ್ಲದ ಚಲುವಂಗಾನೊಲಿದೆ ಎಲೆ ಅವ್ವಾ, ನೀ ಕೇಳಾ ತಾಯೆ. ಭವವಿಲ್ಲದ ಭಯವಿಲ್ಲದ ನಿರ್ಭಯ ಚಲುವಂಗೊಲಿದೆ ನಾನು. ಕುಲಸೀಮೆಯಿಲ್ಲದ ನಿಸ್ಸೀಮ ಚಲುವಂಗೆ ನಾನೊಲಿದೆ. ಇದು ಕಾರಣ ಚನ್ನಮಲ್ಲಿಕಾರ್ಜುನ ಚಲುವಗಂಡನೆನಗೆ ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು."

ಆಗ ಸುಮತಿಯು ಪ್ರತ್ಯುತ್ತರವೀಯಲಿಲ್ಲ. ಆದರೆ ಅವಳಿಗೆ ಮಗಳ ಸಂಬಂಧ ಬಹಳ ಕಳವಳವಾಯಿತು. ನಿರ್ಮಲನೂ ಚಿಂತೆಗೊಳಗಾದನು. ತಾನಾದರೂ ಅವಳನ್ನು ವಿಚಾರಿಸಬೇಕೆಂದು, ಮಂತ್ರಿಯು ಮರುದಿನ ಬಂದರೆ ಏನು ತಿಳಿಸಬೇಕೆಂದು ಕೇಳಿದನು. ಆಗ ಮಹಾದೇವಿಯಕ್ಕನು ಶಿವ ಶಿವಾ ಮೋಹದ ಜಾಲವಿದು—

೫. "ಬಿಟ್ಟೆನೆಂದರೆ ಬಿಡದೀ ಮಾಯೆ, ಬಿಡದಿದ್ದರೆ ಬೆಂಬತ್ತಿತ್ತು ಮಾಯೆ, ಯೋಗಿಗೆ ಯೋಗಿಣಿಯಾಗಿತ್ತು ಮಾಯೆ, ಸವಣಂಗೆ ಸವಣಿಯಾಯಿತ್ತು ಮಾಯೆ, ಯತಿಗೆ ಪರಾಕಿಯಾಗಿತ್ತು ಮಾಯೆ. ನಿನ್ನ ಮಾಯೆಗೆ ನಾನಂಜುವವಳಲ್ಲ, ಚನ್ನಮಲ್ಲಿಕಾರ್ಜುನದೇವಾ ನಿಮ್ಮಾಣೆ."

ಎಂದು ತನ್ನ ತಂದೆಯುವರಿಗೆ ಭವಿಯೊಡನೆ ಮದುವೆಯು ಸಾಧ್ಯವಿಲ್ಲವೆಂದಳು.

ಈ ಮಾತನ್ನು ಕೇಳಿ ನಿರ್ಮಲನು ಆಕೆಗೆ ಕೌಶಿಕನೊಡನೆ ಮದುವೆಯಾದರೆ ಅಪಾರವಾದ ಸಂಪತ್ತು ವೈಭವಗಳು ಪ್ರಾಪ್ತವಾಗುವವೆಂದು ತಿಳಿಸಿ ಹೇಳಿದನು. ಆದರೆ ಮಹಾದೇವಿಯಕ್ಕನು ರಾಜಭೋಗವನ್ನು ತಿರಸ್ಕರಿಸಿದಳು; ಮತ್ತು ಭವಿಯಾದ ಕೌಶಿಕನನ್ನು ವರಿಸುವದು ಶಕ್ಯವಿಲ್ಲವೆಂದು ಸ್ಪಷ್ಟವಾಗಿ ತಿಳಿಸಿದಳು. ಅವಳು ಪರಮಾತ್ಮನನು ವರಿಸಿದ್ದಳು. ಆದುದರಿಂದ ಅವಳು—

೬. "ಎನಗೇಕಯ್ಯ, ಸಾವ ಪ್ರಪಂಚಿನ ಪುತ್ಥಳಿ; ಮಾಯಿಕದ ಮಲಭಾಂಢ; ಆತುರದ ಭವನಿಳಯ ಎನಗೇಕಯ್ಯ? ಬೆರಳು ತಾಳಹಣ್ಣ ಹಿಸುಕಿಪಡೆ ಮೆಲಲುಂಟೇ? ಎನ್ನ ತಪ್ಪು ಒಪ್ಪಿಗೊಳ್ಳಾ ಚನ್ನಮಲ್ಲಿಕಾರ್ಜುನದೇವಾ"

ಎಂದು ಪರಮಾತ್ಮನನ್ನು ಪ್ರಾರ್ಥಿಸುತ್ತಿದ್ದಳು. ಪರಿಸ್ಥಿತಿಯು ಗಂಭೀರವಾಯಿತು. ತಂದೆ ತಾಯಿಗಳು ಮತ್ತಿಷ್ಟು ಚಿಂತೆಗೊಳಗಾದರು. ಬೆಳಗಾದ ಕೂಡಲೆ ಮಂತ್ರಿವರ್ಯರು ನಿರ್ಮಲನ ಮನೆಗೆ ಬಂದರು. ತಂದೆ ತಾಯಿಗಳು ಮಗಳೊಂದಿಗೆ ಖಿನ್ನವದನರಾಗಿ ಕುಳಿತಿದ್ದರು. ನಿರ್ಮಲನು ದುಃಖದಿಂದ ಮಂತ್ರಿಗಳಿಗೆ ತನ್ನ ಕುಮಾರಿಯನ್ನು ರಾಜನಿಗೆ ಕೊಡುವದಿಲ್ಲವೆಂದು ಸ್ಪಷ್ಟವಾಗಿ ತಿಳಿಸಿದನು. ಆಗ ಮಹಾದೇವಿಯಕ್ಕನು ಆ ಮಂತ್ರಿಯನ್ನು ಕುರಿತು—

೭. "ಮುಡಿಬಿಟ್ಟು ಮೊಗಬಾಡಿ ತನು ಕರಗಿದವಳ ಎನ್ನನೇಕೆ ನುಡಿಸುವಿರಿ ಎಲೆ ಅಣ್ಣಗಳಿರಾ? ಎನ್ನನೇಕೆ ಕಾಡುವಿರಿ ಎಲೆ ತಂದೆಗಳಿರಾ? ಬಲವಳಿದು ಭವಗೆಟ್ಟು ಛಲವಳಿದು ಭಕ್ತಿಯಾಗಿ ಚನ್ನಮಲ್ಲಿಕಾರ್ಜುನನ ಕೂಡಿ ಕುಲವಳಿದವಳ?"

ತನ್ನ ಮನೋಭಾವವನ್ನು ತಿಳಿಸಿದಳು.

ಆಗ ಮಂತ್ರಿಯು ಅವಳ ತಾಯಿ ತಂದೆಗಳನ್ನು ಕುರಿತು—

"ಅಯ್ಯಲಾ ಭಕ್ತರಿರ ಕೆಟ್ಟಪಿರಿ ಸುತೆಯಿಂದ
ಅಯ್ಯೊ ಇದಕೇನು? ಅನುಗಾಣೆ ಮೂರ್ಖತೆಯಿಂದ
ದುರ್ಮರಣವಾದಪುದು ಕುಪಿತನಾದಂ ನೃಪತಿ
ದುರ್ಮದಂ ನಿಷ್ಠುರಂ ಹಸ್ತಿಮೂರ್ಖಂ ನೃಪತಿ
ಕೂಸು ಕೊಡದಿರ್ದೊಡೀಗಂ ಕೊಲಲುಂ ಬೆಸಸಿದಂ
ಕೂಸು ಕೊಟ್ಟೊಡೆ ನಿಮಗೆ ಸಕಳ ಸಂಪದಂ"

ಎಂದು ದರ್ಪದಿಂದ ನುಡಿದು ಬಿನ್ನವಿಸಿಕೊಂಡನು. ನಿರ್ಮಲನು ಏನು ಮಾಡಬೇಕು? ಭವಿಯಾದ ಅರಸನಿಗೆ ಮಗಳನ್ನು ಕೊಡುವ ಮನಸ್ಸು ಮೊದಲೇ ಇಲ್ಲ; ಮಗಳೂ ಅದಕ್ಕೆ ಒಪ್ಪುವದಿಲ್ಲ. ಒಂದು ಕಡೆ ಅರಸನ ಕಠೋರವಾದ ಆಜ್ಞೆ, ಮತ್ತೊಂದು ಕಡೆ ಮಗಳ ಮೇಲಿನ

ಪ್ರೇಮ. ತಾಯಿ ತಂದೆಗಳ ಕಳವಳನನ್ನು ಮಗಳು ಅರಿತಳು. ತಂದೆಯು ಬಿಕ್ಕಿ ಬಿಕ್ಕಿ ಅಳುತ್ತಾ—

" ಎಲೆ ಮಗಳೆ, ಮಗಳೆ ನಿನ್ನಯ ದೂಸರಿಂದೆಮಗೆ
ನೆಲಸಿತ್ತು ದುರ್ಮರಣವೇನೆಂಬ ವೃದ್ಧರಿಗೆ
ಹೊಸತು ನಿನ್ನಯ ಭಕ್ತಿ ತಾನೆಮಗೆ ಸಂಕಟಂ
ವಸುಧೆಯೊಳು ಭವಿಯೊಳಗೆ ಬಾಳರೇನುತ್ಕಟಂ
ಕರಿಕಾಲಮ್ಮೆ ತಾಂ ಭವಿಯೊಡನೆ ಬಾಳಳೇ
ಹೇರೂರ ಹೆಂಗೂಸು ಭವಿಗೆ ಸತಿಯಾಗಳೇ
ಎಲೆಲೆ ವೈಜಕ್ಕವ್ವೆ ಭವಿಗೆ ಪುದುವೋಗಳೇ
ಎಲೆಲೆ ಮಾಂಗಾಯಕ್ಕ ಪಾಂಡ್ಯನೊಡಗೂಡಳೇ"

ಎಂದು ಭವಿಯೊಡನೆ ಸಂಗ ಮಾಡಿದವರ ಕತೆಗಳನ್ನು ಹೇಳಿ ಕೊನೆಗೆ—

" ಏಕೆಮ್ಮ ನೀ ವಿಧಿಗೆ ತಂದೆಸ್ವೈ ಬೇಡವ್ವ,
ಲೌಕಿಕದಿ ಕೌಶಿಕನ ಸಂಗಮಂ ಮಾಡವ್ವ"

ಎಂದು ವಿವಿಧ ರೀತಿಯಿಂದ ಅವಳಿಗೆ ಬುದ್ಧಿಯನ್ನು ಹೇಳಿದರು.

ಈಗಂತೂ ಮಹಾದೇವಿಯಕ್ಕನು ಒಳ್ಳೆಯ ಕಠಿಣ ಪರಿಸ್ಥಿತಿಯಲ್ಲಿ ತೊಳಲಾಡಬೇಕಾಯಿತು. ತನ್ನ ಪ್ರೀತಿಯ ತಾಯಿ ತಂದೆಗಳನ್ನು ದುಃಖಕ್ಕೆ ಈಡುಮಾಡಿ, ವಿವಾಹವನ್ನು ತಪ್ಪಿಸಿಕೊಂಡು ವೈರಾಗ್ಯವನ್ನು ಕೈಕೊಳ್ಳಬೇಕೋ? ಇಲ್ಲವೆ ತಾಯಿ ತಂದೆಗಳನ್ನು ಉಳಿಸುವದಕ್ಕಾಗಿ ತನ್ನ ಅಧ್ಯಾತ್ಮ ಸಾಧನೆಯನ್ನು ಬಿಟ್ಟು ಅರಸನ ಮೋಹದ ಮಡದಿಯಾಗಿ ಸಂಸಾರದಲ್ಲಿ ತೊಳಲಾಡಬೇಕೋ? ತಿಳಿಯಹಾಯಿತು. ಎಲ್ಲರೂ ಒಬ್ಬರ ಮುಖವನ್ನೊಬ್ಬರು ನೋಡುತ್ತ ಕುಳಿತರು. ಮಹಾದೇವಿಯಕ್ಕನು ಕ್ಷಣಹೊತ್ತು ಮನಸ್ಸಿನಲ್ಲಿ ವಿಚಾರ ಮಾಡಿ ಒಂದು ನಿಶ್ಚಿತ ಅಭಿಪ್ರಾಯಕ್ಕೆ ಬಂದಳು. ತನ್ನ ಶಿವಪೂಜೆ, ಶಿವಧ್ಯಾನ, ವೈರಾಗ್ಯ ಜೀವನಗಳೂ ನಡೆಯಬೇಕು; ಮತ್ತು ತನ್ನ ತಾಯಿ ತಂದೆ

ಗಳೂ ಅರಸನಿಂದ ಸುರಕ್ಷಿತವಾಗಿ ಉಳಿಯಬೇಕು. ಅರಸನು ಭವಿಯಾದರೂ ಅಡ್ಡಿಯಿಲ್ಲ; ತನ್ನ ಮನಸ್ಸಿನ ಪ್ರಕಾರ ಶಿವಭಕ್ತನಾಗಬಹುದೆಂದೂ, ತನ್ನ ಉಚ್ಚ ತರದ ಜೀವನದ ಸಲುವಾಗಿ ಅಧ್ಯಾತ್ಮಸಾಧನೆಯಲ್ಲಿ ಸಹಾಯವಾಗಬಹುದೆಂದೂ ಯೋಚಿಸಿದಳು. ಆದುದರಿಂದ ಅವಳು ಮಂತ್ರಿಗೆ ಹೀಗೆ ಹೇಳಿದಳು—

"ನಾನು ಭವಿಯ ಸಂಪರ್ಕವನ್ನು ಇಚ್ಛಿಸಲಾರೆನು. ನಿಮ್ಮ ಅರಸನು ಶಿವದೀಕ್ಷೆಯನ್ನು ಪಡೆದು ಶಿವಭಕ್ತನಾದಮೇಲೆ ನನ್ನನ್ನು ವಿವಾಹ ಮಾಡಿಕೊಳ್ಳಬಹುದು. ಇದು ನಿಮ್ಮ ಅರಸನ ಮನಸ್ಸಿಗೆ ಬಂದರೆ ನಿಮ್ಮ ಮಾತಿಗೆ ಒಪ್ಪುವೆನು. ನನ್ನ ಬಯಕೆಗಳನ್ನು ಪೂರೈಸಬೇಕು. ನಾನು ಸದಾ ಶಿವಪೂಜೆ, ಗುರು ಜಂಗಮ ಪೂಜೆಗಳನ್ನು ನಡೆಸುವಂತೆ ವ್ಯವಸ್ಥೆಯಾಗಬೇಕು. ನಿಮ್ಮ ಅರಸನು ಇವುಗಳಿಗೆ ತಪ್ಪಿದರೆ ನನ್ನ ಮನಸ್ಸಿಗೆ ಬಂದಂತೆ ಮಾಡುವೆನು."

ಮಂತ್ರಿಯು ಶಾಂತಚಿತ್ತದಿಂದ ಕೇಳಿದನು. ಮಹಾದೇವಿಯಕ್ಕನನ್ನು ಹೇಗಾದರೂ ಮಾಡಿ ಅರಸನ ಹತ್ತಿರ ಕರೆದುಕೊಂಡು ಹೋದರೆ ಮುಂದಿನ ಪ್ರಸಂಗಗಳು ತಾವಾಗಿಯೇ ಸುಗಮವಾಗಿ ಸಾಗುತ್ತವೆಂದು ತಿಳಿದನು. ಮತ್ತು ಅವನು ಮಹಾದೇವಿಯಕ್ಕನಿಗೆ—

"ನಿಮ್ಮ ಮಾತಿನಂತೆ ನಮ್ಮ ಅರಸನು ನಡೆಯಬಹುದು" ಎಂದು ತಿಳಿಸಿದನು.

ಆಗ ಎಲ್ಲರಿಗೂ ಸಂತೋಷವಾಯಿತು. ಅರಸನು ಒಳ್ಳೆಯ ವೈಭವದಿಂದ ಮಹಾದೇವಿಯಕ್ಕನನ್ನು ಕರೆಯಲು ಕಳಿಸಿದನು. ಅವಳನ್ನು ಗೆಳತಿಯರು ವಸ್ತ್ರಾಲಂಕಾರಗಳಿಂದ ಶೃಂಗರಿಸಹತ್ತಿದರು. ನಿರ್ಮಲನ ಮನೆಗೆ ಅಪಾರವಾದ ಸಂಪತ್ತು ಬರಲಾಯಿತು. ಮುಂದೆ ಮಹಾದೇವಿಯಕ್ಕನು ತಾಯಿತಂದೆಗಳಿಗೆ ನಮಸ್ಕರಿಸಿ ರಾಜನು ಕಳಿಸಿದ ಮುತ್ತಿನ ಪಲ್ಲಕ್ಕಿಯೊಳಗೆ ಕುಳಿತು ಅರಮನೆಗೆ ಹೊರಟಳು. ಊರೊಳಗಿನ ಜನರಿಗೆ ಆನಂದವೂ ಆಶ್ಚರ್ಯವೂ ಏಕಕಾಲಕ್ಕೆ ಉಂಟಾದವು.

ಕೌಶಿಕನು ಮಹಾದೇವಿಯಕ್ಕನನ್ನೇ ಹಂಬಲಿಸುತ್ತ ಕಾಲಕಳೆಯುತ್ತಿದ್ದನು. ಕುಳಿತಲ್ಲಿ ನಿಂತಲ್ಲಿ ಮಹಾದೇವಿಯಕ್ಕನ ಧ್ಯಾನವೇ ಧ್ಯಾನ. ಬಡವರ ಹೆಣ್ಣು, ಬೇಕಾದಷ್ಟು ವಸ್ತ್ರಾಲಂಕಾರಗಳನ್ನೂ ಸುಖ ಸಾಮಗ್ರಿಗಳನ್ನೂ ಚಿನ್ನ ಬೆಳ್ಳಿಗಳನ್ನೂ ಒದಗಿಸಿಕೊಡಲು ತನಗೆ ಸಹಜವಾಗಿ ಒಲಿಯಬಹುದೆಂದು ಅವನ ಗೃಹಿಕೆಯಾಗಿತ್ತು. ಆದರೆ ಅವನು ತಿಳಿದಷ್ಟು ಮಹಾದೇವಿಯಕ್ಕನು ಅವನಿಗೆ ಸುಲಭ ಸಾಧ್ಯವಿಲ್ಲವೆಂದು ಸಹಜವಾಗಿ ತಿಳಿಯುವದು. ಅವನದು ಭೋಗ ಜೀವನ, ಆವಳದು ತ್ಯಾಗ ಜೀವನ, ವೈರಾಗ್ಯ ಜೀವನ. ಪರಮಾತ್ಮನ ಮೋಹಿನಿಯಾಗಿ ಶಿವಸಾಯುಜ್ಯವನ್ನು ಪಡೆಯುವಂತಹದು. ಅವಳು ಸುಂದರವಾದ ಮಂದಿರದಲ್ಲಿ ವಾಸವಾಗಿದ್ದು ನಿಜ. ಆದರೆ ಅವಳು ಅನಾಸಕ್ತಳು. ಅವಳು ಅರಮನೆಯ ಯಾವ ವೈಭವಕ್ಕೂ ಮರುಳಾಗಲಿಲ್ಲ. ಕೌಶಿಕನನ್ನು ನೋಡುತ್ತಿದ್ದಳು. ಆದರೆ ದೃಷ್ಟಿಯಲ್ಲಿ ಪ್ರೇಮವಿಲ್ಲ; ಆಸಕ್ತಿಯಿಲ್ಲ. ಕೌಶಿಕನು, ಮಹಾದೇವಿಯಕ್ಕನು ಈ ಹೊತ್ತಿಲ್ಲ ನಾಳೆಯಾದರೂ ತನಗೆ ಒಲಿದು ಸುಖವನ್ನು ಕೊಡಬಹುದೆಂದು ತಿಳಿದಿದ್ದನು. ಮೇಲಾಗಿ ಅವನು ವಚನ ಕೊಟ್ಟಿದ್ದರಿಂದ ಅವಳ ಯಾವ ಶಿವಪೂಜೆಯ ಕಾರ್ಯಕ್ರಮಕ್ಕೂ ಅಡ್ಡಿ ಮಾಡುವಂತಿದ್ದಿಲ್ಲ. ಆದರೆ ಅವನಿಗೆ ಇದು ಯೋಗ್ಯವೆನಿಸಲಿಲ್ಲ. ತಾನು ರಾಜನಾಗಿ ಬೇಕಾದ ಹೆಣ್ಣನ್ನು ದೊರಕಿಸಲು ಸಾಧ್ಯವಿದ್ದಾಗ ಮತಾಂತರ ಹೊಂದಿ ಶಿವಭಕ್ತನಾಗುವದು ಹೇಗೆ? ಎಂದು ಭಾವಿಸಿದನು. ಆದುದರಿಂದ ಅವನು ಭವಿಯಾಗಿಯೇ ಉಳಿದು ಅವಳ ಮನವೊಲಿಸಲು ಅನೇಕ ಕುಟಿಲ ಉಪಾಯಗಳನ್ನು ಹೂಡಹತ್ತಿದನು.

ಒಮ್ಮೆ ಆತನು ಮಹಾದೇವಿಯಕ್ಕನ ಹತ್ತರ ಕೆಲವು ಚತುರರಾದ ಹೆಂಗಳೆಯರನ್ನು ಕಳಿಸಿ ಅವಳ ಮನಸ್ಸನ್ನು ತಿದ್ದಿ ಒಲಿಸಲು ಪ್ರಯತ್ನಿಸಿದನು. ಅವರು ಮಹಾದೇವಿಯಕ್ಕನ ಹತ್ತರ ಹೋಗಿ ಅರಸನ ಸೌಂದರ್ಯ, ಐಶ್ವರ್ಯಗಳ ವೈಭವಗಳನ್ನು ಸೊಗಸಾಗಿ ಬಣ್ಣಿಸಿ ಅರಸನ ಪಟ್ಟದ ರಾಣಿಯಾಗಿ ಸುಖದಿಂದ ಬಾಳು ಎಂದೂ ಈ ವೈರಾಗ್ಯ ಜೀವನವು ಅವಳಂತಹ ಪ್ರಾಯದ ಹೆಣ್ಣುಮಗಳಿಗೆ ಯೋಗ್ಯವಲ್ಲವೆಂದೂ ಬೋಧಿಸಿದರು.

ಆಗ ಮಹಾದೇವಿಯಕ್ಕನು ಅವರಿಗೆ—

೮. ಗಿರಿಯಲ್ಲದೆ ಹುಲ್ಲು ಮರಡಿಯಲ್ಲಾಡುವದೇ ನವಿಲು? ಕೊಳನಲ್ಲದೆ ಕಿರುವಳ್ಳಕ್ಕೆಳಸುವದೆ ಹಂಸೆ? ಮಾಮರ ತಳಿತಲ್ಲದೆ ಸ್ವರಗೆಯ್ಯುದೆ ಕೋಗಿಲೆ? ಪರಿಮಳವಿಲ್ಲದ ಪುಷ್ಪಕ್ಕೆಳಸುವದೇ ಭ್ರಮರ? ಎನ್ನ ದೇವ ಚನ್ನಮಲ್ಲಿಕಾರ್ಜುನ ನಲ್ಲದೆ ಅನ್ಯಕ್ಕೆಳಸುವದೇ ಎನ್ನ ಮನ ಕೇಳಿರೆ ಕೆಳದಿಯರಿರಾ?

ಅವರ ಉಪದೇಶವು ವ್ಯರ್ಥವಾಯಿತು. ಕೆಲವರು ಸುಮ್ಮನಾದರು, ಕೆಲವರು ಅವಳನ್ನು ಹೀಯಾಳಿಸಿದರು. ಆಗ ಮಹಾದೇವಿಯಕ್ಕನು—

೯. "ಬಂಜೆ ಬೇನೆಯನರಿಯಳು, ಮಲತಾಯಿ ಮುದ್ದುಬಲ್ಲಳೇ? ನೊಂದ ನೋವ ನೋಯದವರೆತ್ತಬಲ್ಲರು? ಚನ್ನಮಲ್ಲಿಕಾರ್ಜುನ, ಇರಿದ ಅಲಗು ಒಡಲಲ್ಲಿ ಮುರಿದು ಹೊರಳುವಳ ನೀವೆತ್ತ ಬಲ್ಲಿರೆ ಎಲೆ ತಾಯಿಗಳಿರಾ?"

ಎಂದು ದುಃಖದಿಂದ ಉತ್ತರ ಕೊಟ್ಟಳು.

ಹೀಗೆ ತಮ್ಮ ಪ್ರಯತ್ನಗಳು ನಿಷ್ಫಲವಾಗಲು ಅವರು ತಿರುಗಿ ಹೋದರು. ನಂತರ ಅರಸನು ಚಂಚಲ ಮನಸ್ಸಿನವನಾಗಿ ಪುನಃ ಕೆಲವು ಶೃಂಗಾರ ಚದುರೆಯರನ್ನು ಅವಳ ಬಳಿಗೆ ಕಳಿಸಿಕೊಟ್ಟನು. ಅವರು ಮಹಾದೇವಿಯಕ್ಕನಿಗೆ—

"ದೇವಿಯರೇ ನೀವು ಚನ್ನಮಲ್ಲಿಕಾರ್ಜುನನನ್ನೇ ನಂಬಿ ಅವನೇ ನಿಮ್ಮ ಒಡೆಯನೆಂದು ಭಾವಿಸಿದರೂ ಅಡ್ಡಿಯಿಲ್ಲ; ಆದರೆ ಅದು ಕೇವಲ ನಿಮ್ಮ ಭಾವನಾ ಪ್ರಪಂಚದಲ್ಲಿ ಸಾಧ್ಯವಾಗುವದು ಹೊರತು ಲೌಕಿಕ ಜೀವನದಲ್ಲಿ ಸಾಧ್ಯವಿಲ್ಲ. ಪರಮಾತ್ಮನು ನಿಮ್ಮನ್ನು ವಿವಾಹವಾಗುವ ನೆಂಬುದು ಆಶ್ಚರ್ಯದ ಸಂಗತಿ. ಆದುದರಿಂದ ಈ ಜೀವನದಲ್ಲಿ ಕೌಶಿಕ ಅರಸನನ್ನು ನಿಮ್ಮ ಪತಿಯನ್ನಾಗಿ ಭಾವಿಸಿರಿ."

ಆಗ ಮಹಾದೇವಿಯಕ್ಕನು ಅವರಿಗೆ ಹೀಗೆ ಮಾರುತ್ತರವಿತ್ತಳು—

೧೦. "ಒಳಗಿನ ಗಂಡನವ್ವ; ಹೊರಗಿನ ಮಿಂಡನವ್ವ; ಎರಡನು ನಡಿಸಲ್ಲು ಬಾರದವ್ವ! ಚನ್ನಮಲ್ಲಿಕಾರ್ಜುನಯ್ಯ, ಬಿಲ್ಲು ಬೆಳವಲಕಾಯಿ ಒಂದಾಗಿ ಹಿಡಿಯಲು ಬಾರದವ್ವ"

ತಾನು ಅರಸನಿಗೆ ಒಲಿದರೆ ವ್ಯಭಿಚಾರ ದೋಷ ತಟ್ಟುವದೆಂದು ಅವಳು ಭಾವಿಸಿದಳು. ಯಾವ ಪತಿವ್ರತೆಯೂ ಪತಿಯನ್ನು ಮೋಸ ಗೊಳಿಸಿ ಪರಪುರುಷರನ್ನು ಬಯಸುವದಿಲ್ಲ. ಹೀಗೆ ವಿಚಾರ ಮಾಡಿ ಅವಳು ಲೌಕಿಕ ಪಾರಮಾರ್ಥಿಕ ಜೀವನಗಳನ್ನು ಕೂಡಿಯೇ ನಡಿಸುವದು ಸಾಧ್ಯವಿಲ್ಲವೆಂದು ತಿಳಿಸಿದಳು.

ಹೀಗೆ ಮಹಾದೇವಿಯಕ್ಕನನ್ನು ಒಲಿಸಿಕೊಳ್ಳಬೇಕೆಂಬ ಅರಸನ ಪ್ರಯತ್ನಗಳೆಲ್ಲವೂ ವ್ಯರ್ಥವಾದವು. ಸಚಿವರಿಗೂ ಉಪಾಯಗಳು ಹೊಳೆಯದಾದವು. ಶೃಂಗಾರ ಚದುರೆಯರೂ ತಮ್ಮ ಶಕ್ತಿ ಮೀರಿ ಪ್ರಯತ್ನಿಸಿದರು. ಎಲ್ಲವೂ ವ್ಯರ್ಥ, ರಾಜಮಂದಿರವು ಶಿವಯೋಗ ಮಂದಿರವಾಯಿತು. ಶಿವಪೂಜೆ, ಜಂಗಮ ಪೂಜೆ, ದಾಸೋಹಗಳು ಎಡೆಬಿಡದೆ ನಡೆಯಹತ್ತಿದವು. ಮೇಲಾಗಿ ಅರಸನು ಶಿವಭಕ್ತರನ್ನು ಹೆದರಿಸಿ ಅವರ ಮಗಳನ್ನು ಅರಮನೆಯಲ್ಲಿ ತಂದಿರಿಸಿ ಅವಳಿಗೆ ತನ್ನನ್ನು ವರಿಸ ಬೇಕೆಂದು ಒತ್ತಾಯಪಡಿಸುತ್ತಿರುವನೆಂದೂ ಸುದ್ದಿಯು ಊರಲ್ಲೆಲ್ಲ ಹಬ್ಬಿತು. ತಾನು ಅರಸನು, ತನಗೆ ಬೇಕಾದ ಜಾತಿಯ ಹೆಣ್ಣನ್ನು ಮದುವೆಯಾಗುವ ಅಧಿಕಾರವದೆಯೆಂದು ಅವನು ತಿಳಿದಿದ್ದನು. ಆದರೆ ಕೊನೆಗೆ ವಿಚಾರ ಮಾಡಿ ಇಲ್ಲಿಯವರೆಗೆ ಅಪ್ರತ್ಯಕ್ಷವಾಗಿ ಎರಡನೆಯವರ ಕಡೆಯಿಂದ ಅವಳನ್ನು ತನ್ನ ವಶಪಡಿಸಿಕೊಳ್ಳಲು ಪ್ರಯತ್ನಿಸಿದ್ದಾಯಿತು. ಆದರೆ ತಾನು ಒಮ್ಮೆಯೂ ಅವಳ ದರ್ಶನಕ್ಕೆ ಹೋಗಿಲ್ಲ. ಆದುದರಿಂದ ಅವಳು ತನ್ನಮೇಲೆ ಕೋಪಿಸಿಕೊಂಡಿರಬಹುದು. ಸ್ವತಃ ಹೋಗಿ ಅವಳಿಗೆ ನಾಲ್ಕು ಸವಿಮಾತುಗಳನ್ನು ಹೇಳಿ ತನ್ನ ಕಾರ್ಯವನ್ನು ಸಾಧಿಸಿ ಕೊಳ್ಳೋಣ ಎಂದು ವಿಚಾರಿಸಿದನು.

ಮರುದಿನ ಮುಂಜಾನೆ ಅವನು ಅವಳ ಶಿವಪೂಜಾ ಮಂದಿರದ ಕಡೆಗೆ ನಡೆದನು. ಅದೇ ಅವಳು ತನ್ನ ಇಷ್ಟಲಿಂಗಪೂಜೆಯನ್ನು ಮುಗಿಸಿ ಕೊಂಡು ಧ್ಯಾನಯೋಗದಲ್ಲಿ ತತ್ಪರಳಾಗಿದ್ದಳು. ಕೌಶಿಕನು ತನ್ನ ರಾಜ ಪೋಷಾಕವನ್ನು ಧರಿಸಿ ಬಾಗಿಲ ಬಳಿ ನಿಂತನು. ಅವಳ ಸುಂದರವಾದ ಕೇಶ, ಪೂರ್ಣ ಚಂದ್ರನಂತಿರುವ ಮುಖಮಂಡಲ, ಕಾಂತಿಯುಕ್ತವಾದ

ಶರೀರ ಇವು ಅವನನ್ನು ಮೋಹಗೊಳಿಸಿದವು. ಅವಳ ಸೌಂದರ್ಯ ವನ್ನು ಅವನು ಕಣ್ತುಂಬ ನೋಡಿ ತಣಿದನು. ಸ್ವಲ್ಪ ಹೊತ್ತಾದ ನಂತರ ಅವಳು ಎಚ್ಚರಾಗಿ ಪರಮಾತ್ಮನನ್ನು ಪ್ರಾರ್ಥಿಸತೊಡಗಿದಳು.

೧೧. "ಪುಣ್ಯ ಪಾಪಂಗಳನರಿಯದ ಮೊದಲು ಅನೇಕ ಭವಂಗಳಲ್ಲಿ ಬಂದೆ ನಯ್ಯ! ನಂಬಿ ಶರಣುವೊಕ್ಕೆನಯ್ಯ! ನಿಮ್ಮನೆಂದೂ ಅಗಲದಂತೆ ಮಾಡಿ ನಡಿಸಯ್ಯ! ನಿಮ್ಮ ಧರ್ಮ! ನಿಮ್ಮನೊಂದನೇ ಬೇಡುವೆನು; ಎನ್ನ ಬಂಧನವ ಬಿಡುವಂತೆ ಮಾಡಯ್ಯ ಶ್ರೀ ಚನ್ನಮಲ್ಲಿಕಾರ್ಜುನಾ"

ಅವಳನ್ನು ಮಾತನಾಡಿಸಿ ಆನಂದಪಡಬೇಕೆಂಬ ಕೌಶಿಕನ ಆಶೆ. ಮಹಾದೇವಿಯಕ್ಕನು ಕಣ್ಣುತೆರೆದು ನೋಡಿದಳು. ಕೌಶಿಕ ದೊರೆ; ಮತ್ತೆ ಯಾರೂ ಇಲ್ಲ. ಅವನು ನಸುನಗುತ ಮೆಲ್ಲಗೆ ಮುಂದೆ ಅಡಿ ಇಡ ಹತ್ತಿದನು. ಮಹಾದೇವಿಯಕ್ಕನು ಬೆದರಿದಳು. ಅವಳು ತನ್ನ ಸೆರಗನ್ನು ಸರಿಪಡಿಸಿಕೊಂಡು ಅವನಿಗೆ ಶಿವನ ಪ್ರಸಾದವನ್ನು ಕೊಡಹೋದಳು. ಆಗ ಅವರ ಸಂವಾದವು ಹೀಗೆ ನಡೆಯಿತು—

**ಅರಸು:—** ದೇವೀ ನಿನ್ನ ಶಿವಪ್ರಸಾದವು ನನಗೆ ಬೇಡ. ನಿನ್ನ ಪ್ರೇಮಯಾಚನೆಗಾಗಿ ನಿನ್ನಡಿ ಬಂದಿದ್ದೇನೆ. ಶಿವನ ಕೃಪೆಯು ನಿನಗಿರಲಿ; ನಿನ್ನ ಕೃಪೆಯು ನನಗಿರಲಿ. ನಿನಗೆ ನನ್ನ ಸಕಲ ಸಾಮ್ರಾಜ್ಯವನ್ನು ಬಿಟ್ಟುಕೊಟ್ಟಿದ್ದೇನೆ.

**ಮಹಾದೇವಿಯಕ್ಕ:—** ಶಿವ ಶಿವಾ! ಶಿವಪ್ರಸಾದವನ್ನು ಅಲ್ಲ ಗಳೆಯಬಾರದು. ನಶ್ವರವಾದ ಈ ದೇಹ ಸುಖವನ್ನು ಇಚ್ಛಿಸಿ ಶಿವಾನಂದ ವನ್ನು ತಿರಸ್ಕರಿಸುವದು ಯೋಗ್ಯವಲ್ಲ. ಈ ದೇಹದಲ್ಲಿ ಏನಿರುವದು?

೧೨. "ಅಮೇಧ್ಯದ ಹಡಿಕೆ, ಮೂತ್ರದ ಕುಡಿಕೆ, ಎಲುವಿನ ತಡಿಕೆ, ಸುಡಲೀ ದೇಹವ. ಒಡಲುವಿಡಿದು ಕೆಡದಿರು; ಚನ್ನಮಲ್ಲಿಕಾರ್ಜುನನರಿ ಮರುಳೆ"

**ಅರಸು:—** ಸೌಂದರ್ಯವತಿಯೇ ನಿನ್ನ ವೇದಾಂತದ ಅಮೃತವು ನನಗೆ ಬೇಡ. ಆದರೆ ನನಗೆ ಬೇಕು ನಿನ್ನ ಅಧರಾಮೃತವು.

**ಮಹಾದೇವಿಯಕ್ಕ:—** ಮಹಾರಾಜನೇ ಹಾದಿಬಿಟ್ಟು ನಡೆಯು ಬೇಡ. ನೀನು ಮೊದಲು ವಚನ ಕೊಟ್ಟಂತೆ ಶಿವಭಕ್ತನಾಗು.

**ಅರಸು:—** ನಾನು ನಿನ್ನ ಪ್ರೀತಿಯ ಭಕ್ತನು. ನಿನ್ನ ಕಾಯ ಸ್ಪರ್ಶದಿಂದ ನನ್ನ ಭವಿತನ ಹಿಂಗಿ ಭಕ್ತನಾಗುವದಿಲ್ಲವೇ? ನಿನ್ನ ರೂಪು ಯೌವನಗಳು ವ್ಯರ್ಥವಾಗುವದಿಲ್ಲವೇ?

**ಮಹಾದೇವಿಯಕ್ಕ:—** ನನ್ನ ಸೊಬಗು ಸೌಂದರ್ಯಗಳ ಸರ್ವಸ್ವವನ್ನು ಸೂರೆ ಮಾಡುವವನು ಪರಮಾತ್ಮನೊಬ್ಬನು. ಎಲ್ಲವೂ ಆತನಿಗೆ ಮೀಸಲು. ಪರಮಾತ್ಮನಿಗೆ ಅರ್ಪಣ ಮಾಡಿದ ಈ ದೇಹದ ಮೇಲೆ ಯಾರ ಅಧಿಕಾರವೂ ಇಲ್ಲ.

ಹೀಗೆ ಹೇಳುತ್ತ ಅವಳು ಧ್ಯಾನಮಗ್ನಳಾದಳು. ಕೌಶಿಕನು ಅವಳ ಸೌಂದರ್ಯಕ್ಕೆ ಮನಸೋತು ತಡೆಯಲಾರದೆ ಅವಳನ್ನು ಆಲಿಂಗಿಸಲು ಮುಂದೆ ಸಾಗಿ ಅವಳ ಕೈ ಹಿಡಿಯಹೋದನು. ಅವನ ಕೈ ಸ್ಪರ್ಶವಾದದ್ದೊಂದೇ ತಡ ಅವಳ ಇಡಿಯ ಶರೀರವು ಕಂಪಿಸಿತು. ವಿದ್ಯುತ್ ಶಕ್ತಿಯ ಆಘಾತ ಹೊಡೆದು ಕೌಶಿಕನು ಮೂರ್ಛೆ ಹೊಂದಿದನು. ಮಹಾದೇವಿಯಕ್ಕನು ದುಃಖಿತಳಾಗಿ ಒಳಗೆ ನಡೆದಳು. ದಾಸಿಯರು ಬಂದು ಅರಸನ ಉಪಚಾರ ನಡೆಸಿದರು,

ಈ ಘಟನೆಯಿಂದ ಮಹಾದೇವಿಯಕ್ಕನು ಅರಸನ ದುರಾಚರಣೆಯ ಬಗೆಗೆ ಸಂಶಯಪಡಹತ್ತಿದಳು. ಯಾವ ಕಾಲಕ್ಕೆ ಏನು ಮಾಡುವನೋ ಎಂಬ ಭಯ ಹುಟ್ಟಿತು. ಆದರೆ ಧೈರ್ಯಗುಂದಲಿಲ್ಲ. ಪರಮಾತ್ಮನನ್ನೇ ಮೊರೆಯಿಡುತ್ತ ಕಾಲ ಕಳೆಯಹತ್ತಿದಳು.

ಅವಳು—

೧೩. "ಸಂಸಾರ ಬೆಂಬಿಡದೆ ಕಾಡುತ್ತಿದೆಯಯ್ಯ! ಏವೆನೇವೆನಯ್ಯ! ಅಂದಂದಿನ ದಂದುಗಕ್ಕೆ ಏವೆನೇವೆನಯ್ಯ! ಬೆಂದ ಒಡಲು; ಹೊರೆವುದಕ್ಕೆ ನಾನಾರ ಚನ್ನಮಲ್ಲಿಕಾರ್ಜುನಯ್ಯ ಕೊಲ್ಲು, ಕಾಯಿ ನಿಮ್ಮ ಧರ್ಮ."

೧೪. "ತೆರಣಿಯ ಹುಳು ತನ್ನ ಸ್ನೇಹದಲ್ಲಿ ಮನೆಯ ಮಾಡಿ, ತನ್ನ ನೂಲು ತನ್ನ ಸುತ್ತಿ ಸಾವತೆರನಂತೆ ಮನಬಂದುದ ಬಯಸಿ ಬೇವುತಿದ್ದೇನೆ. ಅಯ್ಯ, ಎನ್ನ ಮನದ ದುರಾಶೆಯ ಮಾಣಿಸಿ ನಿಮ್ಮತ್ತ ತೋರಾ ಚನ್ನಮಲ್ಲಿಕಾರ್ಜುನಾ."

೧೫. "ಸಂಸಾರವೆಂಬ ಹಗೆಯಯ್ಯ ತಂದೆ! ಎನ್ನ ವಂಶ ವಂಶದಪ್ಪದೆ ಅರಸಿಕೊಂಡು ಬರುತ್ತಿದೆಯಯ್ಯ! ಎನ್ನವಸರಸಿಯರಸಿ ಹಿಡಿದು ಕೊಲ್ಲುತ್ತಿದೆಯಯ್ಯ ನಿಮ್ಮ ಮರೆವೊಕ್ಕೆ ಕಾಯಯ್ಯ! ಬಿನ್ನಪವನವಧಾರು ಚನ್ನಮಲ್ಲಿಕಾರ್ಜುನಾ"

೧೬. "ಎನ್ನ ಮಾಯದ ಮದವ ಮುರಿಯಯ್ಯ! ಎನ್ನ ಕಾಯದ ಕತ್ತಲೆಯ ಕಳೆಯಯ್ಯ! ಎನ್ನ ಜೀವದ ಜಂಜಡವ ಮಾಣಿಸಯ್ಯ! ಎನ್ನ ದೇವ ಚನ್ನಮಲ್ಲಿಕಾರ್ಜುನ ದೇವಯ್ಯ, ಎನ್ನ ಸುತ್ತಿದ ಪ್ರಪಂಚವ ಬಿಡಿಸು ನಿಮ್ಮ ಧರ್ಮ."

೧೭. ಒಂದಲ್ಲ ಎರಡಲ್ಲ, ಮೂರಲ್ಲ, ನಾಲ್ಕಲ್ಲ, ಎಂಬತ್ತು ನಾಲ್ಕು ಲಕ್ಷ ಯೋನಿಯೊಳಗೆ ಬಂದೆ ಬಂದೆ. ಬಾರದ ಭವಂಗಳನುಂಡೆನುಂಡೆ, ಶುಭಾಶುಭಂಗಳ ಹಿಂದಣ ಜನ್ಮಂಗಳೇನಾದಡೂ ಆಗಲಿ! ಮುಂದೆ ನೀ ಕರುಣಿಸಾ ಚನ್ನಮಲ್ಲಿಕಾರ್ಜುನಾ."

ಎಂದು ದೀನ ಸ್ವರದಿಂದ ಪರಮಾತ್ಮನಿಗೆ ಬೇಡಿಕೊಳ್ಳುತ್ತಿದ್ದಳು.

ಇತ್ತ ಕೌಶಿಕನ ಕಾಮಾಗ್ನಿಯು ಹೆಚ್ಚಾಗಿ, ಬಳಲಿ ಬೆಂಡಾಗುತ್ತಿದ್ದಾನೆ. ಹೇಗಾದರೂ ಮಾಡಿ ಅವಳನ್ನು ಕೂಡಬೇಕು ಎಂದು ಆಶೆಬಟ್ಟು ಅವಳನ್ನು ಕನವರಿಸುತ್ತಿದ್ದನು. ಆದರೆ ಅವಳದು ಶಿವಾರ್ಪಿತ ಕಾಯ. ಅವಳು ಪರಮಾತ್ಮನಲ್ಲಿ

೧೮. "ತನು ನಿಮ್ಮ ರೂಪಾದ ಬಳಿಕ ನಾನಾರಿಗೆ ಮಾಡುವೆ? ಮನ ನಿಮ್ಮ ರೂಪಾದ ಬಳಿಕ ನಾನಾರ ನೆನೆವೆ? ಪ್ರಾಣ ನಿಮ್ಮ ರೂಪಾದ ಬಳಿಕ, ನಾನಾರನಾರಾಧಿಸುವೆ? ಅರಿವು ನಿಮ್ಮಲ್ಲಿ ಸ್ವಯವಾದ ಬಳಿಕ ನಾನಾರನರಿವೆ? ಚನ್ನಮಲ್ಲಿಕಾರ್ಜುನಾ ನಿಮ್ಮಲ್ಲಿ ನೀವಾಗಿ ನಿಮ್ಮಿಂದ ನಿಮ್ಮ ಮರೆದೆನಯ್ಯ."

ಎಂದು ತನ್ನ ಅರ್ಪಿತ ಭಾವವನ್ನು ವ್ಯಕ್ತ ಮಾಡುತ್ತಾಳೆ.

ಮತ್ತೆ ಒಂದು ದಿನ ಮಹಾದೇವಿಯಕ್ಕನು ಲಿಂಗಪೂಜೆ ತೀರಿಸಿಕೊಂಡು ಜಂಗಮದಾಸೋಹ ಮಾಡಲು ಬಂದಳು. ಆಗ ಕೌಶಿಕನು ಒಮ್ಮೆಲೆ ಎದುರಾಗಿ ಬಂದು—

"ದೇವೀ ನನ್ನ ಸಕಲ ಸೌಭಾಗ್ಯ ಸಂಪತ್ತುಗಳನ್ನು ನಿನಗೆ ಧಾರೆ ಎರೆದುಕೊಡುತ್ತೇನೆ. ನನ್ನನ್ನು ಪ್ರೀತಿಸು ನಿನ್ನ ಹಂಬಲದಿಂದ ನಾನು

ತೊಳಲಾಡುತ್ತಿದ್ದೇನೆ" ಎಂದು ಹೇಳಿ ನಸುನಕ್ಕು ಅವಳ ಸೆರಗನ್ನು ಹಿಡಿದನು. ಆಗ ಮಹಾದೇವಿಯಕ್ಕನು ಅವನ ಹುಚ್ಚುತನವನ್ನು ನೋಡಿ,

೧೯. "ಎಮ್ಮೆಗೊಂದು ಚಿಂತೆ, ಸಮಗಾರಗೊಂದು ಚಿಂತೆ, ಧರ್ಮಿಗೊಂದು ಚಿಂತೆ, ಕರ್ಮಿಗೊಂದು ಚಿಂತೆ. ನನಗೆ ನನ್ನ ಚಿಂತೆ; ತನಗೆ ತನ್ನ ಕಾಮದ ಚಿಂತೆ. ಒಲ್ಲೆ ಹೋಗು, ಶರಗ ಬಿಡು ಮರುಳೇ, ನನಗೆ ಚನ್ನಮಲ್ಲಿಕಾರ್ಜುನ ದೇವರು ಒಲಿವರೋ ಒಲಿಯರೋ ಎಂಬ ಚಿಂತೆ"

ಎಂದು ಸಿಟ್ಟಿನಿಂದ ತನ್ನ ಸೆರಗನ್ನು ಕೊಸರಿಕೊಂಡು ದಾಸೋಹದ ಕಡೆಗೆ ಸಾಗಿಯೇ ಬಿಟ್ಟಳು. ಕೌಶಿಕನು ತನ್ನ ಮೂರ್ಖತನಕ್ಕೆ ನಾಚಿಕೊಂಡನು.

ಹೀಗೆ ಒಂದರ ತರುವಾಯ ಒಂದು ಘಟನೆಗಳು ಜರುಗಿದವು. ಮಹಾದೇವಿಯಕ್ಕನು ಎಂದಿನಂತೆ ತನ್ನ ಶಿವಪೂಜೆ ಜಂಗಮ ಸೇವೆಗಳಲ್ಲಿ ತೊಡಗಿದಳು. ಒಂದು ದಿನ ಮುಂಜಾನೆ ಮಹಾದೇವಿಯಕ್ಕನು ಸ್ನಾನವನ್ನು ಮಾಡಿ ಮಡಿಯನ್ನು ಉಡುತ್ತಿರುವಾಗ ಅಕಸ್ಮಾತ್ತಾಗಿ ಅವಳ ದೀಕ್ಷಾ ಗುರುವು ಅರಮನೆಗೆ ಬಂದು "ಓಂ ನಮಃಶಿವಾಯ" ಎಂದು ಉಚ್ಚರಿಸಿದನು. ಆಗ ಮಹಾದೇವಿಯಕ್ಕನು ಆನಂದದಿಂದ ಬಂದು ಅವನ ಪಾದಪೂಜೆ ಮಾಡಿದಳು. ಮುಂದೆ ತೀರ್ಥ ಪ್ರಸಾದಗಳನ್ನು ಸೇವಿಸಿ ಅವನಿಗೆ ನಮಸ್ಕಾರ ಮಾಡಿ ಅವನ ಸನ್ನಿಧಿಯಲ್ಲಿ ಕುಳಿತಳು. ಅವನು ಅವಳಿಗೆ ಅವಳ ತಲೆಯ ಮೇಲೆ ತನ್ನ ಅಮೃತ ಹಸ್ತವನ್ನಿಟ್ಟು ಕಲ್ಯಾಣವಾಗಲಿ ಮಗಳೇ ಎಂದು ಆಶೀರ್ವದಿಸಿದನು. ಅವಳು ಅತ್ಯಂತ ಹರುಷಿತಳಾಗಿ ಪುನಃ ಅವನನ್ನು ವಂದಿಸಿ ಈ ಪ್ರಕಾರ ಬಿನ್ನವಿಸುತ್ತಿದ್ದಳು.

೨೦. "ಜಂಗಮವೆನ್ನ ಪ್ರಾಣ, ಜಂಗಮವೆನ್ನ ಜೀವ, ಜಂಗಮವೆನ್ನ ನಿಧಿನಿಧಾನ, ಜಂಗಮವೆನ್ನ ಪುಣ್ಯದ ಫಲ, ಜಂಗಮವೆನ್ನ ಹರುಷದ ಮೇರೆ, ಚನ್ನಮಲ್ಲಿಕಾರ್ಜುನ, ಜಂಗಮರ ತಿಂಥಿಣಿಯಲ್ಲಿ ಓಲಾಡುವೆ."

ಇದೇ ಸಮಯಕ್ಕೆ ಕೌಶಿಕ ಮಹಾರಾಜನು ಆಗಮಿಸಿದನು. ಮಹಾದೇವಿಯಕ್ಕನು ಯಾವನೋ ಒಬ್ಬ ಜಂಗಮನ ಹತ್ತರ ಕುಳಿತು

ವನ್ನು ನೋಡಿ ಸಹಿಸದಾದನು. ಇನ್ನು ಮೇಲೆ ಇವರನ್ನು ರಾಜಮಂದಿರ ದಲ್ಲಿ ಇರಗೊಡಬಾರದೆಂದು ನಿಶ್ಚಯಿಸಿದನು. ಅವನು ಅತ್ಯಂತ ಸಿಟ್ಟಿನಿಂದ—

"ನಿಮ್ಮಂತಹ ಕಪಟ ಮತ್ತು ಪುಂಡ ಜಂಗಮರಿಂದ ಅರಮನೆ ಯೆಲ್ಲ ಅಪವಿತ್ರವಾಯಿತು. ಮಹಾದೇವಿಯು ಗುರುವಿಗೆ ತಕ್ಕ ಶಿಷ್ಯ ಳಾಗಿದ್ದಾಳೆ. ಗಂಡು ಹೆಣ್ಣೆಂಬ ಭೇದವಿಲ್ಲದೆ ಸರಸಸಲ್ಲಾಪ ನಡೆಯುವ ದೆಂದರೇನು! ಕಾವಿಯ ಬಟ್ಟೆಗಳನ್ನುಟ್ಟವರೆಲ್ಲ ಜಂಗಮರೇ? ಈಗಿಂದೀಗ ಇಲ್ಲಿಂದ ತೊಲಗಿರಿ ಇಲ್ಲವಾದರೆ ರಾಜದಂಡನೆಗೆ ಗುರಿ ಯಾಗಬೇಕಾದೀತು" ಎಂದು ಗದರಿಸಿದನು. ಮಹಾದೇವಿಯಕ್ಕನು ಈ ನುಡಿಗಳನ್ನು ಕೇಳಿ ಬೆದರಿಬಿದ್ದಳು. ಆಗ ಗುರುವು ಅವಳಿಗೆ "ಮಗಳೇ ಇಂದಿಗೆ ನಿನ್ನ ಸಂಸಾರದ ಪಾಶವು ಹರಿಯಿತು. ತಪಸ್ಸು ಫಲಿಸಿತು. ನೀನು ಇಲ್ಲಿಂದ ಕಲ್ಯಾಣಕ್ಕೆ ತೆರಳು ಅಲ್ಲಿ ಬಸವೇಶ್ವರ, ಚನ್ನಬಸವೇಶ್ವರ ಅಲ್ಲಮ ಪ್ರಭು ಮೊದಲಾದ ಮಹಾ ಜ್ಞಾನಿಗಳ ದರ್ಶನವಾಗುವದು." ಎಂದು ಹೇಳಿ ಅವಳಿಗೆ ಆಶೀರ್ವಾದಮಾಡಿ ಹೋಗುವನು.

ಮಹಾದೇವಿಯಕ್ಕನು ಇಲ್ಲಿಯವರೆಗೆ ಎರಡು ಸಲ ಕೌಶಿಕನ ವರ್ತನೆಯನ್ನು ಸಹಿಸಿದ್ದಳು. ಅರಮನೆಯ ಜೀವನವು ಅವಳಿಗೆ ವಿರಸ ವಾಗಹತ್ತಿತು. ಈಗ ಗುರು ಜಂಗಮರ ನಿಂದೆಯನ್ನು ಕೇಳುವದು ಅವಳಿಗೆ ಸಹನವಾಗಲಿಲ್ಲ. ಕೂಡಲೆ ಅವಳು ಎದ್ದುನಿಂತು ಅರಮನೆಯ ವಿಲಾಸ ಜೀವನವನ್ನು ತುಚ್ಛೀಕರಿಸಿ, ಮೈಮೇಲಿನ ವಸ್ತ್ರಾಲಂಕಾರ ಗಳೆನ್ನೆಲ್ಲ ತೆಗೆದು ಚಲ್ಲಿದಳು. ಉಟ್ಟ ಮಡಿಯನ್ನು ಕಳೆದೊಗೆದಳು; ಅರಮನೆಯಲ್ಲಿ ಒಂದು ಕ್ಷಣವೂ ನಿಲ್ಲಲಾರೆನೆಂದು ನಿಶ್ಚಯಿಸಿದಳು.

೨೧. "ಕೈಸಿರಿಯ ದಂಡವ ಕೊಳಬಹುದಲ್ಲದೆ ಮೈಸಿರಿಯ ದಂಡವ ಕೊಳ ಲುಂಟೇ? ಉಟ್ಟಂತ ಉಡಿಗೆ ತೊಡಿಗೆಯನೆಲ್ಲ ಸೆಳೆದುಕೊಳ್ಳಬಹುದಲ್ಲದೆ ಮುಚ್ಚಿ ಮುಸುಕಿರ್ದ ನಿರ್ವಾಣವ ಸೆಳೆದುಕೊಳ್ಳಬಹುದೇ? ಚನ್ನಮಲ್ಲಿಕಾರ್ಜುನ ದೇವರ ಬೆಳಗನುಟ್ಟು ಲಜ್ಜೆಗೆಟ್ಟವಳಿಗೆ ಉಡಿಗೆ ತೊಡಿಗೆಗಳ ಹಂಗೇಕೋ ಮರುಳೇ"

ಎಂದು ಅವಳು ಅರಸನಿಗೆ. ನಿಷ್ಠುರವಾಗಿ ನುಡಿದಳು; ಮತ್ತು ಗಂಭೀರವಾದ ಮುದ್ರೆಯನ್ನು ತಾಳಿ ತನ್ನ ಕೇಶಾಂಬರವನ್ನೇ ಧರಿಸಿ "ನಾನು ಜನ್ಮದಿಂದಿರುವವರೆಗೆ ಪರಮಾತ್ಮನ ಹೊರತಾಗಿ ಯಾರನ್ನೂ ವರಿಸಲಾರೆನು" ಎಂದು ಹೇಳಿ ಅರಮನೆಯಿಂದ ಹೊರಟೇಬಿಟ್ಟಳು. ಕೌಶಿಕ ಅರಸನು ಆಶ್ಚರ್ಯದಿಂದಲೂ, ಭಯದಿಂದಲೂ ಸ್ತಬ್ಧನಾಗಿ ನಿಂತುಬಿಟ್ಟನು.

## ೩. ಅರಮನೆಯ ತ್ಯಾಗ. ಪರಮಾತ್ಮನ ಸಾಕ್ಷಾತ್ಕಾರ

ಹೀಗೆ ಒಳ್ಳೆಯ ಹದಿನಾರು ವರುಷದ ಯೌವನದಲ್ಲಿ ಮಹಾದೇವಿಯಕ್ಕನು ತನ್ನ ತಾಯಿ ತಂದೆಗಳನ್ನೂ, ಬಂಧು ಬಳಗದವರನ್ನೂ ಅರಮನೆಯ ಗೆಳತಿಯರ ಪರಿವಾರವನ್ನೂ ತೊರೆದು ಸರ್ವಸಂಗ ಪರಿತ್ಯಾಗ ಮಾಡಿ ಬಹು ದಿನಗಳಿಂದ ಧ್ಯಾನಿಸುತ್ತಿದ್ದ ತನ್ನ ಇಷ್ಟದೇವರಾದ ಚನ್ನಮಲ್ಲಿಕಾರ್ಜುನನನ್ನು ಶೋಧಿಸುತ್ತ ಹೊರಟಳು ಅವಳ ತಾಯಿ ತಂದೆಗಳು ಇಲ್ಲಿಯವರೆಗೆ ತಿನಿಸಿ ಉಣಿಸಿ ಬೆಳಿಸಿದ ಮಗಳ ಗತಿ ಹೀಗಾಯಿತೆಂದು ಬಹಳ ತಳಮಳಗೊಂಡರು. ಅರಮನೆಯ ಸಂಬಂಧವು ತಮಗೆ ಬೇಡವೆಂದು ಎಷ್ಟು ಹೇಳಿದರೂ ತಮ್ಮನ್ನು ಉಳಿಸುವದಕ್ಕಾಗಿ ಹೊರಟು ಈ ಪರಿಸ್ಥಿತಿಯುಂಟಾಯಿತೆಂದು ಕಳವಳಪಟ್ಟರು. "ಕೊನೆಗೆ ಬಟ್ಟೆಯನ್ನಾದರೂ ಉಟ್ಟುಕೊಂಡು ಹೋಗು, ಲೋಕದ ಜನರು ಏನಂದಾರು? ಎಂದು ಪರಿಪರಿಯಿಂದ ಬೇಡಿಕೊಳ್ಳಲು ಅವಳು ಅವರಿಗೆ ಮಲಿನ ಬಟ್ಟೆಗಳನ್ನು ಧರಿಸುವದಿಲ್ಲವೆಂದೂ ದೇಹ ಮನಸ್ಸುಗಳು ಶುದ್ಧವಿದ್ದಮೇಲೆ ಬಟ್ಟೆಗಳ ಅವಶ್ಯಕತೆಯೇನು? ಲೋಕದ ಜನರು ಏನು ಅಂದರೂ ಸಮಾಧಾನದಿಂದ ಇರಬೇಕೆಂದು ಹೀಗೆ ಹೇಳುವಳು—

೨೨. ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಂಗಳಿಗಂಜಿದಡೆಂತಯ್ಯ! ಸಮುದ್ರದ ತಡೆಯಲ್ಲಿ ಮನೆಯ ಮಾಡಿ ನೊರೆ ತೆರೆಗಳಿಗಂಜಿದಡೆಂತಯ್ಯ! ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದಡೆಂತಯ್ಯ! ಚನ್ನಮಲ್ಲಿಕಾರ್ಜುನದೇವ ಕೇಳಯ್ಯ ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿ ನಿಂದೆಗಳು ಬಂದಡೆ ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು"

ಇಷ್ಟು ದಿನಗಳವರೆಗೆ ಅರಮನೆಯಲ್ಲಿ ಅಕ್ಕನನ್ನು ಸೇವೆ ಮಾಡುತ್ತಿದ್ದ ಗೆಳತಿಯರು "ಈ ವೈಭವದ ಜೀವನವನ್ನು ತ್ಯಾಗಮಾಡಿ ಹೀಗೇಕೆ ಹೊರಟಿರುವಿರಿ? ಮರಳಿ ಬಾ" ಎನ್ನಲು ಅವಳು—

೨೩. "ಮಂಗಳವೇ ಮಜ್ಜನವೆನಗೆ, ವಿಭೂತಿಯೇ ಒಳಗುಂದವರಿಸಿನ ವೆನಗೆ, ದಿಗಂಬರವೇ ದಿವ್ಯಾಂಬರವೆನಗೆ, ಶಿವಪಾದರೇಣುವೆ ಅನುಲೇಪವೆನಗೆ, ರುದ್ರಾಕ್ಷಿಯೇ ಮೈದೊಡಿಗೆಯೆನಗೆ, ಶರಣರ ಪಾದಂಗಳೇ ತೊಂಡಿಲ ಬಾಸಿಗ ವೆನಗೆ, ಚನ್ನಮಲ್ಲಿಕಾರ್ಜುನನೇ ಗಂಡನೆನಗೆ, ಅನು ಚನ್ನಮಲ್ಲಿಕಾರ್ಜುನಂಗೆ ಮದುವಳಿಗೆ ಎನಗೆ ಬೇರೆ ಶೃಂಗಾರವೇಕೆ ಹೇಳಿರವ್ವಾ?

ಎಂದು ಅವರಿಗೆ ಹೇಳಿ ಹೊರಟೇಬಿಟ್ಟಳು.

ಮಹಾದೇವಿಯಕ್ಕನು ಉಡುತಡಿಯ ಗ್ರಾಮವನ್ನು ಬಿಟ್ಟು ಕಲ್ಯಾಣದ ಮಾರ್ಗವಾಗಿ ಹೊರಟಳು. ಆದರೆ ಅವಳ ಮಾರ್ಗಕ್ರಮಣವು ಎಷ್ಟು ಕಠಿಣವಾಯಿತೆಂಬುದು ಊಹಿಸಲು ಅಸಾಧ್ಯ. ಒಬ್ಬಳೇ ಒಬ್ಬಳು, ಅಂಗರಕ್ಷಕರಿಲ್ಲ; ಮೇಲಾಗಿ ಹೆಣ್ಣುಮಗಳು. ಅವರಲ್ಲಿ ಒಳ್ಳೇ ರೂಪ ವತಿಯಾದ ನವಯೌವನ ಕನ್ಯೆಯು. ತನ್ನ ನೀಳವಾದ ದೀರ್ಘವಾದ ಕೇಶವನ್ನೇ ಮೈತುಂಬ ಪಸರಿಸಿಕೊಂಡು ನಡೆದಿದ್ದಾಳೆ. ದಾರಿಯಲ್ಲಿ ಇಂಥವಳನ್ನು ಕಂಡು ಲೋಕದ ಜನರು ಏನು ಅಂದಿರಬೇಕು? ಇವಳು ವೀರ ವಿರಾಗಿಣಿಯು, ಸಂಸಾರದ ಸುಖವನ್ನು ತ್ಯಾಗಮಾಡಿದ ಅದ್ಭುತ ವೈರಾಗ್ಯಸಂಪನ್ನಳು, ಆದರೆ ಸಾಮಾನ್ಯ ಜನರಿಗೆ ಇವಳ ಘನತೆಯು ಹೇಗೆ ತಿಳಿಯಬೇಕು? ಕೆಲವರು ಚೇಷ್ಟೆ ಮಾಡಿರಬಹುದು. ಕೆಲವರು ಇವಳನ್ನು ಮೋಹಿಸಿರಬಹುದು. ಕೆಲವರು ಹುಚ್ಚಿ ಎಂದಿರ ಬಹುದು! ಆದರೆ ಮಹಾದೇವಿಯಕ್ಕನು ಅತ್ಯಂತ ಧೈರ್ಯಶಾಲಿನಿಯಾಗಿ ದಟ್ಟಡವಿಯಲ್ಲಿ ಪರಮಾತ್ಮನನ್ನು ಧ್ಯಾನಿಸುತ್ತ ಮುಂದೆ ಸಾಗಿದಳು. ಅವಳಿಗೆ ಹಸಿವೆ ನೀರಡಿಕೆಗಳ ಪರಿವೆಯಿಲ್ಲ. ತನ್ನ ದೇಹದ ಬಗೆಗೆ ಅಭಿಮಾನವಿಲ್ಲ. ಆತ್ಮನ ಬಗೆಗೆ ಲಕ್ಷ್ಯವಿಲ್ಲ. ಈ ನಶ್ವರವಾದ ಶರೀರದ ಬಗೆಗೆ ಅವಳು ಆ ಕಾಲವಲ್ಲಿ ಯಾವ ಭಾವವನ್ನು ತಳೆದಿದ್ದಳೆಂದು ಕಂಡುಬರುವದು.

೨೪. ಹಣ್ಣು ಮೆದ್ದ ಬಳಿಕ ಆ ಮರವನಾರು ತರಿದರೇನು? ಹೆಣ್ಣು ಬಿಟ್ಟ ಬಳಿಕ ಆಕೆಯನಾರು ಕೂಡಿಕೊಂಡರೇನು? ಮಣ್ಣು ಬಿಟ್ಟ ಬಳಿಕ ಆ ಕೆಯ್ಯ ನಾರುತ್ತರೇನು? ಚನ್ನಮಲ್ಲಿಕಾರ್ಜುನನರಿದ ಬಳಿಕ ಆ ಕಾಯುವ ನಾಯಿ ತಿಂದ ರೇನು ನೀರು ಕುಡಿದರೇನು ?"

ತಾನೊಬ್ಬಳೇ ಇರುವಳೆಂದು ಅವಳೇನು ಅಂಜಲಿಲ್ಲ ಅಳುಕಲಿಲ್ಲ. ಅವಳ ಧೈರ್ಯವನ್ನೂ ಸಾಹಸವನ್ನೂ ನೋಡಿವರೆ ಎಂತಹ ವೈರಾಗ್ಯ ಶಾಲಿನಿಯೆಂದು ಕಂಡುಬರದಿರಲಾರದು.

೨೫. "ಆರೂ ಇಲ್ಲದವಳೆಂದು ಆಳಿಗೊಳಲು ಬೇಡ ಕಂಡೆಯ್ಯಾ. ಏನು ಮಾಡಿದಡೆಯೂ ನಾನಂಜುವವಳಲ್ಲ, ತರಗೆಲೆಯ ಮೆಲ್ಲಿದ್ದು ನಾನಿಹೆನು. ಸುರಿಗೆಯ ಮೇಲೊರಗಿ ನಾನಿಹೆನು. ಚನ್ನಮಲ್ಲಿಕಾರ್ಜುನಯ್ಯಾ, ಕರಕೆಡೆ ನೋಡಿದೊಡೆ ಒಡಲನು ಪ್ರಾಣವನು ನಿಮಗೊಪ್ಪಿಸಿ ಶುದ್ಧಳಹೆನು."

ಅನ್ನ ನೀರುಗಳಿಗೂ ಊಟ ವಸತಿಗಳಿಗೂ ಅವಳೇನು ಧೈರ್ಯ ಗುಂದಲಿಲ್ಲ. ಪರಮಾತ್ಮನೇ ತನಗೆ ಬೇಕಾದಷ್ಟು ಸುಖಗಳನ್ನು ಸಹಜ ವಾಗಿ ಸೃಷ್ಟಿಯಲ್ಲಿ ಒದಗಿಸಿದ್ದಾನೆ.

೨೬. "ಹಸಿವಾದೊಡೆ ಭಿಕ್ಷಾನ್ನಗಳುಂಟು; ತೃಷೆಯಾದೊಡೆ ಕೆರೆ ಹಳ್ಳ ಭಾವಿಗಳುಂಟು; ಶಯನಕ್ಕೆ ಹಾಳು ದೇಗುಲಗಳುಂಟು; ಚನ್ನಮಲ್ಲಿಕಾರ್ಜುನಯ್ಯಾ ಆತ್ಮ ಸಂಗಾತಕ್ಕೆ ನೀನೆನಗುಂಟು"

ತನಗೆ ಏನಾದರೂ ಸಂಭವಿಸಿದರೆ ಅವಳು ಎಷ್ಟು ನಿಶ್ಚಲವಾದ ಮನೋಭಾವವನ್ನು ತಾಳಿದ್ದಳೆಂದು ಸಹಜವಾಗಿ ತಿಳಿದುಬರುವದು.

೨೭. ಕಿಡಿ ಕಿಡಿ ಕೆದರಿದೊಡೆ ಎನಗೆ ಹಸಿವು ತೃಷೆ ಅಡಗಿತೆಂಬೆನು. ಮುಗಿಲು ಹರಿದು ಬಿದ್ದಡೆ, ಎನಗೆ ಮಜ್ಜನಕ್ಕೆರೆದರೆಂಬೆನು. ಗಿರಿ ಮೇಲೆ ಬಿದ್ದಡೆ, ಎನಗೆ ಪುಷ್ಪವೆಂಬೆನು. ಚನ್ನಮಲ್ಲಿಕಾರ್ಜುನಯ್ಯಾ ಶಿರ ಹರಿದು ಬಿದ್ದಡೆ ಪ್ರಾಣ ನಿನಗರ್ಪಿತ ವೆಂಬೆನು."

ಈ ತರದ ಅಚಲ ಮನೋಧೈರ್ಯದಿಂದ ಅವಳು ಮುಂದೆ ಸಾಗಿದ್ದಳು. ಪರಮಾತ್ಮನ ಧ್ಯಾನಮಗ್ನಳಾದ ಅವಳಿಗೆ ಭಿಕ್ಷಾನ್ನಗಳು ಸಹ ಬೇಡವಾದವು. ಅವಳು—

೨೮. "ಮನೆ ಮನೆ ತಪ್ಪದೆ ಕೈಯೊಡ್ಡಿ ಬೇಡುವಂತೆ ಮಾಡಯ್ಯಾ. ಬೇಡಿ ದೊಡೆ ಇಕ್ಕದಂತೆ ಮಾಡಯ್ಯಾ. ಇಕ್ಕಿದೊಡೆ ನೆಲಕ್ಕೆ ಬೀಳುವಂತೆ ಮಾಡಯ್ಯಾ.

ನೆಲಕ್ಕೆ ಬಿದ್ದೊಡೆ ನಾನೆತ್ತಿಕೊಂಬುದಕ್ಕೆ ಮುನ್ನವೆ ಶುನಿ ಎತ್ತಿಕೊಂಬಂತೆ ಮಾಡಯ್ಯ ಚನ್ನಮಲ್ಲಿಕಾರ್ಜುನಯ್ಯ"

ಎಂದು ಅನನ್ಯಭಾವದಿಂದ ಬೇಡಿಕೊಳ್ಳುತ್ತಿದ್ದಳು.

ಮಹಾದೇವಿಯಕ್ಕನು ಈ ಪ್ರಕಾರ ಚನ್ನಮಲ್ಲಿಕಾರ್ಜುನನನ್ನು ನೆನೆಯುತ್ತ, ಹಳ್ಳ ಕೊಳ್ಳಗಳನ್ನೂ, ಗಿರಿಗಹ್ವರಗಳನ್ನೂ, ದರಿಕಂದರಗಳನ್ನೂ ದಾಟುತ್ತ ಸಹ್ಯಾದ್ರಿಯ ಗಗನಚುಂಬಿತವಾದ ನಿಬಿಡ ಘೋರಾರಣ್ಯವನ್ನು ಪ್ರವೇಶಿಸಿದಳು. ಅವಳು—

೨೯. ಹಿಂಡನಗಲಿ ಹಿಡಿವಡೆದ ಕುಂಜರ ತನ್ನ ವಿಂಧ್ಯವ ನೆನೆವಂತೆ ನೆನೆವೆನಯ್ಯ! ಬಂಧನಕ್ಕೆ ಬಂದ ಗಿಳಿ ತನ್ನ ಬಂಧುವ ನೆನೆವಂತೆ ನೆನೆವೆನಯ್ಯ! ಕಂದ, ನೀನಿತ್ತ ಬಾ ಎಂದು ನೀವು ನಿಮ್ಮಂದವ ತೋರಯ್ಯ ಚನ್ನಮಲ್ಲಿಕಾರ್ಜುನಾ"

೩೦. "ನಚ್ಚುಗೆ ಮನ ನಿಮ್ಮಲ್ಲಿ. ಮಚ್ಚುಗೆ ಮನ ನಿಮ್ಮಲ್ಲಿ. ಸಲುಗೆ ಮನ ನಿಮ್ಮಲ್ಲಿ. ಸೋಲುಗೆ ಮನ ನಿಮ್ಮಲ್ಲಿ. ಅಳಲುಗೆ ಮನ ನಿಮ್ಮಲ್ಲಿ. ಬಳಲುಗೆ ಮನ ನಿಮ್ಮಲ್ಲಿ. ಕರಣುಗೆ ಮನ ನಿಮ್ಮಲ್ಲಿ ಕೊರಗುಗೆ ಮನ ನಿಮ್ಮಲ್ಲಿ ಎನ್ನ ಪಂಚೇಂದ್ರಿಯಂಗಳು ಕಬ್ಬುನ ಉಂಡೆ ನೀರಿನಂತೆ ನಿಮ್ಮಲ್ಲಿ ಬೆರಸುಗೆ ಚನ್ನಮಲ್ಲಿಕಾರ್ಜುನಯ್ಯ."

ಎಂದು ಅನನ್ಯಭಾವದಿಂದ ಪರಮಾತ್ಮನನ್ನು ಧ್ಯಾನಿಸುವಳು.

ತನ್ನ ಕರೆ ಪರಮಾತ್ಮನಿಗೆ ಮುಟ್ಟಿತೋ ಇಲ್ಲವೋ! ಇಲ್ಲದಿದ್ದರೆ ಅವನು ಒಲಿಯುವದಿಲ್ಲವೆ? ಆದರೂ ಮಹಾದೇವಿಯಕ್ಕನು ನಿರ್ಮಲ ಮನಸ್ಸಿನಿಂದ—

೩೧. "ಅಯ್ಯಾ ನೀ ಕೇಳಿದರೆ ಕೇಳು, ಕೇಳದಿದ್ದೊಡೆ ಮಾಣು. ನಾ ನಿನ್ನ ಹಾಡಿದಲ್ಲದೆ ಸೈರಿಸಲಾರೆನಯ್ಯ! ಅಯ್ಯಾ ನೀನೊಲಿದರೆ ಒಲಿ, ಒಲಿಯದಿದ್ದೊಡೆ ಮಾಣು. ನಾ ನಿನ್ನ ಪೂಜಿಸಿದೆನಲ್ಲದೆ ಸೈರಿಸಲಾರೆನಯ್ಯ! ಅಯ್ಯಾ ನೀ ಮಚ್ಚಿದರೆ ಮಚ್ಚು, ಮಚ್ಚದಿದ್ದೊಡೆ ಮಾಣು. ನಾ ನಿನ್ನನಪ್ಪಿದೆನಲ್ಲದೆ ಸೈರಿಸಲಾರೆನಯ್ಯ! ಅಯ್ಯಾ ನೀ ನೋಡಿದೊಡೆ ನೋಡು, ನೋಡದಿದ್ದೊಡೆ ಮಾಣು. ನಾ ನಿನ್ನ ನೋಡಿ ಹಿಗ್ಗಿ ಹಾರೈಸಿದಲ್ಲದೆ ಸೈರಿಸಲಾರೆನಯ್ಯ! ಚನ್ನಮಲ್ಲಿಕಾರ್ಜುನಯ್ಯ ನಾ ನಿಮ್ಮ ಪೂಜಿಸಿ ಹರುಷದೊಳೋಲಾಡುವೆನಯ್ಯ"

ಎಂದು ನಿಷ್ಠೆಯಿಂದ ತನ್ನ ಕರ್ತವ್ಯವನ್ನು ನೆರವೇರಿಸುತ್ತಿದ್ದಳು. ಹೀಗೆ ಪ್ರಾರ್ಥಿಸುತ್ತ ಅವಳು ಬಹಳ ದಾರಿಯನ್ನು ನಡೆದು, ದಣಿವಿನಿಂದಲೂ ಹಸಿವಿನಿಂದಲೂ ಬಹಳ ಬಳಲಿದಳು. ಆದುದರಿಂದ ಅವಳು ಸಮೀಪದಲ್ಲಿರುವ ಹೊಳೆಯಲ್ಲಿ ಸ್ನಾನ ಮಾಡಿ, ಫಲಗಳನ್ನು ಸೇವಿಸಿ, ನೀರು ಕುಡಿದು ಸ್ವಲ್ಪ ಶಾಂತಳಾಗಿ ಚನ್ನಮಲ್ಲಿಕಾರ್ಜುನನನ್ನು ಪುನಃ ಧ್ಯಾನಿಸುತ್ತ ಒಂದು ಮರದಡಿಯಲ್ಲಿ ಒರಗುವಳು. ಕೂಡಲೆ ಅವಳಿಗೆ ಗಾಢವಾದ ನಿದ್ರೆಯು ಹತ್ತಿತು. ಮುಂದೆ ಇಳಿಹೊತ್ತಿನ ಸಮಯಕ್ಕೆ ತಂಗಾಳಿಯು ಮೆಲ್ಲನೆ ಸುಳಿಯಲು ಅವಳು ಎಚ್ಚತ್ತು ಸುತ್ತು ಮುತ್ತಲಿನ ಸೌಂದರ್ಯವನ್ನೂ ಸಂಜೆಯ ಸೂರ್ಯನ ಹೊಂಬಣ್ಣವನ್ನೂ ನೋಡಿ—

೩೨. "ಆರಸಿನವನೆ ಮಿಂದು ಹೊಂದೊಡಿಗೆಯನೆ ತೊಟ್ಟು, ದೇವಾಂಗವ ಸುಟ್ಟು ಪುರುಷ ಬಾರಾ! ನಿನ್ನ ಬರವು ಎನ್ನಸುವಿನ ಬರವು, ಬಾರಯ್ಯ ಚನ್ನಮಲ್ಲಿಕಾರ್ಜುನಯ್ಯ ಬಂದಾನೆಂದು ಬಟ್ಟೆಗಳ ನೋಡಿ ಬಾಯಾರುತ್ತಿಹೆನು."

ಎಂದು ಪುನಃ ತನ್ನ ಪ್ರಿಯನ ಆಗಮನವನ್ನು ನಿರೀಕ್ಷಿಸುವಳು. ಅಷ್ಟರಲ್ಲಿ ಹೊತ್ತು ಮುಳುಗಲು ಕೋಗಿಲೆಗಳ ಮಧುರ ಸ್ವರವು ಕೇಳಿಸುವದು. ಆ ದಿಸೆಯಲ್ಲಿ ಅವಳು ಮುಂದೆ ಸಾಗಲು, ಅಲ್ಲಿ ಮಾವಿನ ತೋಪಿನಲ್ಲಿ ಕೋಗಿಲೆಗಳು ಹಾಡುತ್ತಿದ್ದವು. ಗಿಳಿಗಳು ಚಿಲಿಮಿಲಿ ಎಂದು ಸ್ವರಗೈಯುತ್ತಿದ್ದವು. ಹಂಸ ಪಕ್ಷಿಗಳು ಆನಂದದಿಂದ ಕಲ ಕಲ ಧ್ವನಿ ಮಾಡುತ್ತಿದ್ದವು. ಭ್ರಮರಗಳು ಝೇಂಕರಿಸುತ್ತಿದ್ದವು. ನವಿಲುಗಳು ನರ್ತಿಸುತ್ತಿದ್ದವು. ಇಷ್ಟು ಚಕ್ಕಂದದಿಂದ ಸಡಗರದಿಂದ ನಲಿಯುತ್ತಿದ್ದ ಇವುಗಳೇನಾದರೂ ತನ್ನ ಪ್ರಿಯನ ವಿಷಯವಾಗಿ ಹೇಳಬಹುದೆಂದು—

೩೩. ಚಿಲಿಮಿಲಿ ಎಂದೋದುವ ಗಿಳಿಗಳಿರಾ, ನೀವು ಕಾಣಿರೆ, ನೀವು ಕಾಣಿರೆ, ಸರವೆತ್ತಿ ಹಾಡುವ ಕೋಗಿಲೆಗಳಿರಾ, ನೀವು ಕಾಣಿರೆ, ನೀವು ಕಾಣಿರೆ. ಎರಗಿ ಬಂದಾಡುವ ತುಂಬಿಗಳಿರಾ, ನೀವು ಕಾಣಿರೆ, ನೀವು ಕಾಣಿರೆ. ಕೊಳತಡೆಯೊಳಾಡುವ ಹಂಸೆಗಳಿರಾ, ನೀವು ಕಾಣಿರೆ, ನೀವು ಕಾಣಿರೆ, ಗಿರಿಗಹ್ವರದೊಳಾಡುವ ನವಿಲುಗಳಿರಾ ನೀವು ಕಾಣಿರೆ, ನೀವು ಕಾಣಿರೆ. ಚನ್ನಮಲ್ಲಿಕಾರ್ಜುನನೆಲ್ಲಿರ್ದಿಹನೆಂದು ನೀವು ಹೇಳಿರೆ, ನೀವು ಹೇಳಿರೆ."

ಎಂದು ಸೀತಾದೇವಿಯನ್ನು ಕಳೆದುಕೊಂಡ ರಾಮನು ಮತ್ತು ಊರ್ವಶಿಯನ್ನು ಕಳೆದುಕೊಂಡ ವಿಕ್ರಮನು ವಿರಹದಿಂದ ಬಳಲಿ ಬೆಂಡಾಗಿ ಕಂಡ ಕಂಡ ಗಿಡಬಳ್ಳಿಗಳನ್ನೂ ಪಕ್ಷಿಗಳನ್ನೂ ಕೇಳುವಂತೆ ಮಹಾದೇವಿಯಕ್ಕನು ಇವುಗಳನ್ನು ಕೇಳಿದಳು. ಆದರೆ ಅಡವಿಯಲ್ಲಿ ಅವಳಿಗೆ ಪ್ರತಿಧ್ವನಿಯ ಹೊರತು ಯಾವ ಉತ್ತರವೂ ದೊರೆಯಲಿಲ್ಲ. ಸುತ್ತಲೂ ಕಗ್ಗತ್ತಲು ಮುಸುಕಲು ಮತ್ತೆ,

೩೪. "ಚನ್ನಮಲ್ಲಿಕಾರ್ಜುನ, ಹಗಲು ನಾಲ್ಕು ಜಾವ ನಿಮ್ಮ ಕಳವಳದಲ್ಲಿಪ್ಪೆ, ನೋಡಯ್ಯ. ಇರುಳು ನಾಲ್ಕು ಜಾವ ನಿಮ್ಮ ವಿಕಳಾವಸ್ಥೆಯಲ್ಲಿರ್ಪೆ, ನೋಡಯ್ಯ. ಇರುಳು ಹಗಲು ನಿಮ್ಮ ಕಳವಳದಲ್ಲಿರ್ಪೆ, ನೋಡಯ್ಯ. ನಿಮ್ಮೊಲುಮೆ ಸಟ್ಟು, ಹಸಿವು, ತೃಷೆ, ನಿದ್ರೆಯ ಮರೆತೆನು."

ಹೀಗೆ ಧ್ಯಾನಿಸಿ ತಳಮಳದಿಂದ ಸ್ವಲ್ಪ ಹೊತ್ತು ಮಗ್ಗಲು ಹಚ್ಚಲು ಚಂದ್ರೋದಯವಾಗಿ ಚಂದ್ರನು ಮೇಲಕ್ಕೇರಿ ತೋಟದಲ್ಲೆಲ್ಲ ಬೆಳುದಿಂಗಳು ಬೀಳುವದು. ಸುಳಿಗಾಳಿ ಬೀಸಲು ಬೆಳುದಿಂಗಳಲ್ಲಿ ಅವಳಿಗೆ ಚನ್ನಮಲ್ಲಿಕಾರ್ಜುನನ ನೆನಪಾಗಿ—

೩೫. "ಅಳಿಸಂಕುಳವೇ, ಮಾಮರವೇ, ಬೆಳುದಿಂಗಳೇ, ಕೋಗಿಲೆಯೇ ನಿಮ್ಮ ನಿಮ್ಮನೆಲ್ಲರನು ಒಂದು ಬೇಡುವೆನು. ಎನ್ನೊಡೆಯ ಚನ್ನಮಲ್ಲಿಕಾರ್ಜುನ ದೇವಕೆ ಕಂಡರೆ ಕರೆದು ತೋರಿರೆ."

ಎಂದು ಪುನಃ ಬೇಡಿಕೊಳ್ಳುವಳು.

೩೬. "ವನವೆಲ್ಲ ನೀವೆ. ವನದೊಳಗಣ ದೇವತರುವೆಲ್ಲ ನೀವೆ. ತರುವಿನೊಳಗಾಡುವ ಖಗ ಮೃಗವೆಲ್ಲ ನೀವೆ. ಚನ್ನಮಲ್ಲಿಕಾರ್ಜುನ, ಸರ್ವ ಭರಿತನಾಗಿ ಎನಗೆ ಮುಖದೋರ."

೩೭. "ಆಲಿಸೆನ್ನ ಬಿನ್ನಹವ, ಲಾಲಿಸೆನ್ನ ಬಿನ್ನಪವ, ಪಾಲಿಸೆನ್ನ ಬಿನ್ನಪವ, ಏಕೆನ್ನ ಮೊರೆಯ ನೋಡೆ, ಏಕೆನ್ನ ದುಃಖವ ಚನ್ನಮಲ್ಲಿಕಾರ್ಜುನಯ್ಯ"

ಆಗ ಅವಳು ತಾನು ಸಾಕ್ಷಾತ್ಕಾರ ಪಡೆಯುವ ಚನ್ನಮಲ್ಲಿಕಾರ್ಜುನನನ್ನು ಹೀಗೆ ಚಿತ್ರಿಸುವಳು—

೩೮. "ಹೊಳೆವ ಜಡೆಯ ಮೇಲೆ ಎಳವೆಳದಿಂಗಳು ಫಣಿಮಣಿ ಕರ್ಣ ಕುಂಡಲದವ ನೋಡವ್ವ! ರುಂಡಮಾಲೆಯ ಕೊರಳವನ ಕಂಡರೆ ಒಮ್ಮೆ ಬರ ಹೇಳವ್ವ! ಗೋವಿಂದನ ನಯನ ಉಂಗುಟದ ಮೇಲಿಪ್ಪುದು ಚನ್ನಮಲ್ಲಿಕಾರ್ಜುನ ದೇವನ ಕುರುಹವ್ವ!"

ಈ ರೀತಿಯಿಂದ ತನ್ನ ಪ್ರಿಯನ ಕುರುಹನ್ನು ಹೇಳುವಳು.

ಹೀಗೆ ಹಲವು ಪರಿಯಿಂದ ಮಹಾದೇವಿಯಕ್ಕನು ಹಲುಬಿದರೂ ಅವಳ ನಲ್ಲನು ಕಾಣದಿರಲು ಅವಳಿಗೆ ಬಹಳ ವ್ಯಥೆಯಾಗುವದು. ಬೆಳುದಿಂಗಳು ಹೆಚ್ಚು ಹಬ್ಬುವದು. ತಂಗಾಳಿಯು ಬೀಸುವದು. ಆಗ ಅವಳು ತನ್ನ ಪ್ರಿಯನನ್ನು ಕರೆದು ಕರೆದು ಬೇಸತ್ತು ಸಿರಾಶೆ ಹೊಂದಿ ಕೊನೆಗೆ ಧ್ಯಾನಸ್ಥಳಾಗುವಳು. ಕೂಡಲೆ ಅವಳಿಗೆ ನಿದ್ರೆ ಹತ್ತಿತು; ಮತ್ತು ಅವಳ ಕನಸಿನಲ್ಲಿ ಏನೋ ಒಂದುಪ್ರಕಾರದ ಸಾಕ್ಷಾತ್ಕಾರವಾದ ಮರುದಿನ ಮುಂಜಾನೆ ತೋಟದಲ್ಲಿ ಭೆಟ್ಟಿಯಾದ ಒಬ್ಬ ಹೆಣ್ಣುಮಗಳಿಗೆ ತನ್ನ ವಿಶಿಷ್ಟವಾದ ಅನುಭವವನ್ನು ಹೇಳುವಳು.

೩೯. "ಅಕ್ಕ ಕೇಳವ್ವ, ನಿನ್ನೆ ಇರುಳಲಿ ನಾನೊಂದು ಕನಸ ಕಂಡೆ. ಚಿಕ್ಕ ಚಿಕ್ಕ ಜಡೆಗಳ ಸುಲಿಪಲ್ಲಗೊರವನು ಭಿಕ್ಷಕ್ಕೆ ಬಂದುದ ಕಂಡೆನವ್ವ, ಮಿಕ್ಕು ಮೀರಿ ಹೋಹನ ಬೆಂಬತ್ತಿ ಕೈವಿಡಿದೆನು. ಆತನ ಅಪ್ಪಿಕೊಂಡು ತಳವೆಳ ಗಾದೆನೆಲಗೆ."

ಈಗ ಮಹಾದೇವಿಯಕ್ಕನಿಗೆ ಪರಮ ಹರುಷವಾಗಿತ್ತು. ತನ್ನ ಹಂಬಲವು ಈಡೇರಿತು. ಈ ಆನಂದದ ಭರದಲ್ಲಿ ಆ ಹೆಣ್ಣುಮಕ್ಕಳಿಗೆ—

೪೦. "ಚಿನ್ನಕ್ಕರಿಸಿನ! ಚಿನ್ನಕ್ಕರಿಸಿನ! ಚಿನ್ನಕ್ಕರಿಸಿನವ ಕೊಳ್ಳಿರವ್ವ! ನಮ್ಮ ನಲ್ಲನ ಮೆಯ್ಯ ಹತ್ತುವ ಅರಿಸಿನವ ಕೊಳ್ಳಿರವ್ವ! ಒಳಗುಂಪದರಿಸಿನವ ಮಿಂದು ಚನ್ನಮಲ್ಲಿಕಾರ್ಜುನನಪ್ಪಿರವ್ವ!"

ಎಂದು ಹೇಳುವಳು. ಮತ್ತು—

೪೧. "ಇಂದೆನ್ನ ಮನೆಗೆ ಗಂಡ ಬಂದಿಹನೆಲಗವ್ವ. ನಿಮ್ಮ ನಿಮಗೆಲ್ಲಾ ಶೃಂಗಾರವ ಮಾಡಿಕೊಳ್ಳಿ. ಚನ್ನಮಲ್ಲಿಕಾರ್ಜುನನೀಗಳೆ ಬಂದಿಹನು ಇದಿರುಗೊಳ್ಳ ಬನ್ನಿರೆ ಅವ್ವಗಳಿರಾ."

ಎಂದು ಎಲ್ಲರೂ ಉತ್ಸಾಹದಿಂದ, ಆನಂದದಿಂದ ತನ್ನ ಸಡಗರದಲ್ಲಿ ಭಾಗಿಗಳಾಗಬೇಕೆಂದು ಕೊನೆಗೆ—

೪೨. "ನಾನು ನಿನಗೊಲಿದೆ, ನೀನು ಎನಗೊಲಿದೆ. ನೀನೆನ್ನ ಅಗಲದಿಪ್ಪೆ, ನಾ ನಿನ್ನನಗಲದಿಪ್ಪೆನಯ್ಯಾ. ನಿನಗೆ ನನಗೆ ಬೇರೊಂದು ಠಾವುಂಟೇ? ನೀನು ಕರುಣಿ ಎಂಬುದ ನಾನು ಬಲ್ಲೆನು. ನೀನಿರಿಸಿದ ಗತಿಯೊಳಗೆ ಇಪ್ಪವಳಾನಯ್ಯಾ, ನೀನೆ ಬಲ್ಲೆ ಚನ್ನಮಲ್ಲಿಕಾರ್ಜುನಾ."

ಎಂದು ಸಂತೋಷದಿಂದ ನಲಿದಾಡುವಳು.

# ೪. ಕಲ್ಯಾಣ ಪ್ರಯಾಣ

ಈ ಸಮಯಕ್ಕೆ ಮಹಾದೇವಿಯಕ್ಕನು ಕಲ್ಯಾಣವನ್ನು ಸಮೀಪಿಸಿದ್ದಳು. ಆದರೆ ಅವಳಿಗೆ ಅದರ ಅರಿವೇ ಇದ್ದಿಲ್ಲ. ಅವಳು ಪರಮಾತ್ಮನ ಧ್ಯಾನದಲ್ಲಿಯೇ ಮಗ್ನಳಾಗಿದ್ದಳು. ಅವಳು ಕಲ್ಯಾಣಕ್ಕೆ ಬರುತ್ತಿರುವಾಗ ಅವಳ ವೈರಾಗ್ಯವನ್ನೂ ಭಕ್ತಿಯನ್ನೂ ಶೂನ್ಯ ಸಂಪಾದನೆಯ ಕರ್ತರು ಬಹು ಮಾರ್ಮಿಕವಾಗಿ ಹೃದಯಂಗಮವಾಗಿ ವರ್ಣಿಸಿದ್ದಾರೆ.

"ಇತ್ತಲು ಪರಮೇಶ್ವರನ ನಿರೂಪದಿಂದ ಒಬ್ಬ ರುದ್ರಕನ್ನಿಕೆ ಮರ್ತ್ಯದಲ್ಲಿ ಒಗೆದು ಉಡುತಡಿಯ ಮಹದೇವಿಯಕ್ಕನೆಂಬ ನಾಮವಂ ಧರಿಸಿ ಲಿಂಗಧಾರಣವಾಗಲೊಲ್ಲೆವೆಂಬ ಭವಿಯ ಸೋಂಕದೆ ಅಂಗಸಂಗಮಂ ತೊರೆದು, ಲಿಂಗ ಸಂಗದೊಳು ಅವಿರಳ ಸಂಗಿಯಾಗಿ, ತನ್ನ ದಿವ್ಯ ರೂಪ ಲಾವಣ್ಯವನೆಡೆಗೊಂಡು, ಷೋಡಶ ಪ್ರಾಯದ ಯೌವನದ ಸುಖದ ಸುಗ್ಗಿ ಶಿವನೊಲ್ಪರವಶವನೈದಿ ಸರ್ವ ಕರಣಂಗಳ ಅರುವಿಂಗಾಹುತಿಯ ನಿಕ್ಕಿ ದಿಗಂಬರದುಡಿಗೆಯನುಟ್ಟು ಕನ್ನ ಕೇಶವೆಂಬಂಬರವ ಮುಸುಕಿಟ್ಟು ಕರಸ್ಥಲದೊಳಗಿಪ್ಪ ಇಷ್ಟಲಿಂಗದೊಳು ದೃಷ್ಟಿ ನಟ್ಟು ಮನಮುಟ್ಟಿ ಭಾವ ಕರಿಗೊಂಡು ಲೌಕಿಕ ಲಜ್ಜಾಭಾವವಂ ತೊರೆದು. ಭವಸಾಗರಂ ದಾಂಟಿ ಚನ್ನಮಲ್ಲಿಕಾರ್ಜುನನ ವಿಕಳಾವಸ್ಥೆಯೊಳ್ ತನ್ನ ಮರೆದು ಮಹಾ ವೈರಾಗ್ಯಮಂ ಬೀರುತ್ತ ಕರುಣ ರಸಮಂ ಹೀರುತ್ತ ನಿಶ್ಚಲ ಬುದ್ಧಿಯ ನೆಡೆಗೊಂಡು ಭಕ್ತಿಯ ಭಾಗ್ಯವೆನಿಪ ಮುಕ್ತಿಯ ತವರ್ಮನೆಯೆನಿಪ ಶಿವಭಾವ ಸಂಪನ್ನೆ, ಪ್ರಸಾದದ ಮೇರುವೆ, ತತ್ವ ಶಿಖಾಮಣಿ, ಪುಣ್ಯದ ಪುಂಜೆ, ಸೃಷ್ಟಿಯ ಕಣಿ, ಸತ್ಯದ ಸದನ, ಶಾಂತಿಯ ನಿಧಿ, ಚಿದಂಬರ ಸಂಯುತೆ, ಸ್ವಾನುಭವದ ಸಾಗರ, ನಿತ್ಯದ ನಿವಾಸೆ ಎನಿಪ ಮಹದೇವಿಯಕ್ಕಗಳು ಸುಖಾಳಾಪಂಗೈಯುತ್ತಾ ಪ್ರತ್ಯಕ್ಷ ಮುಕ್ತಾಂಗನೆಯ ಸುಳುಹು ದಿಟ ದಿಟವೆನಿಸಿ ಸಕಲ ಲೋಕಂಗಳಂ ಪಾವನ ಮಾಡುತ್ತ, ಮುಟ್ಟಿದುದ ಪರುಷ, ಮೆಟ್ಟಿದ ಧರೆ ಪಾವನ, ನೋಡಿದುದೆಲ್ಲ ಪವಿತ್ರ, ನುಡಿದುದೆಲ್ಲ

ಶಿವತತ್ವ, ನಡೆಮುದೆಲ್ಲ ಶಿವಮಾರ್ಗ, ನೆರೆಮುದೆಲ್ಲ ದೇವಸಭೆಯಾಗಿ ಸಕಲ ಕ್ಷೇತ್ರಂಗಳಂ ಪಾವನವ ಮಾಡುತ್ತ ತನ್ನ ಕೇಳ್ದ ಕಂಡ ಕೈಮುಗಿದ ಸಕಲ ಜನಂಗಳೆಲ್ಲಂ ಕೃತಾರ್ಥರಂ ಮಾಡುತ್ತ" ಕಲ್ಯಾಣದ ಸಮೀಪ ಬಂದಳು.

ಮಹಾದೇವಿಯಕ್ಕನು ಬರುವ ವೃತ್ತಾಂತವು ಈ ಮೊದಲೇ ಕಲ್ಯಾಣದಲ್ಲಿ ಶಿವಶರಣರಿಗೆ ಅಂತಜ್ಞಾನದಿಂದ ತಿಳಿದಿತ್ತು. ಭಕ್ತಿ ಭಾಂಡಾರಿಯಾದ ಬಸವೇಶ್ವರನು ಅವಳ ಆಗಮನವನ್ನು ಪ್ರಭುದೇವರಿಗೆ ತಿಳಿಸಿ ಕಿನ್ನರಿ ಬೊಮ್ಮಯ್ಯನೆಂಬ ಶರಣನನ್ನು ಅವಳನ್ನು ಸ್ವಾಗತಿಸಿ ಕರಕೊಂಡು ಬರಲು ಕಳಿಸಿದ್ದನು. ಕಿನ್ನರಿ ಬೊಮ್ಮಯ್ಯನು ಮಹಾನುಭಾವ, ಮಹಾ ಶರಣ. ಅವನು ಕಲ್ಯಾಣದ ಹೊರಬದಿಗೆ ಇಳಿಹೊತ್ತಿನ ಸಮಯದಲ್ಲಿ ತಿರುಗಾಡುತ್ತಿದ್ದನು. ಸಂಜೆಯಾಗುತ್ತ ಬಂದಿತ್ತು. ಇದೇ ಸಮಯಕ್ಕೆ ಮಹಾದೇವಿಯಕ್ಕನು ಆಗಮಿಸಿದಳು. ಕಿನ್ನರಿ ಬೊಮ್ಮಯ್ಯನ ದೃಷ್ಟಿಯು ಆಕೆಯ ಕಡೆಗೆ ಹೊರಳಿತು. ಸಮೀಪಕ್ಕೆ ಹೋಗಲು ಆಕೆಯ ಮುಖ ಸೌಂದರ್ಯವನ್ನು ನೋಡಿದನು. ನೀಲವಾದ ಕೇಶ ರಾಶಿಯು ಶೋಭಿಸುತ್ತಿತ್ತು. ಮೈಮೇಲೆ ಬಟ್ಟೆ ಇಲ್ಲ. ಕಣ್ಣುಗಳು ತೇಜಃಪುಂಜವಾಗಿದ್ದವು. ಈ ದಿಗಂಬರ ಸುಂದರವಾದ ಯೌವನದ ಹೆಣ್ಣನ್ನು ನೋಡಿ ಬೊಮ್ಮಯ್ಯನು ಬೆರಗಾದನು, ಅವನೂ ಅವಳನ್ನು ಪರೀಕ್ಷಿಸಬೇಕೆಂದು—

೪೩. "ಕಾಯದ ಕಳವಳವಿರಲು, ಪ್ರಾಣದಲ್ಲಿ ಮಾಯೆಯಿರಲು ಏತರ ಗಮನ, ಇದೇತರ ನಿರ್ವಾಣ? ಮಹಾಲಿಂಗ ತ್ರಿಪುರಾಂತಕನು ನಿನ್ನ ಸಂಸಾರಿಯೆಂಬನಲ್ಲದೆ ಸಜ್ಜನೆಯೆಂದು ಕೈ ವಿಡಿವನಲ್ಲ ಕೇಳಾ ಮರುಳೇ"

ಎಂದು ಅವಳು ಬತ್ತಲೆ ಇದ್ದುದಕ್ಕೆ ಸಂಶಯಪಟ್ಟು ಲಜ್ಜಾತ್ಯಾಗ ಮಾಡಿದ ಹೆಣ್ಣೆಂದು ಕೇಳಿದನು. ಮಹಾದೇವಿಯಕ್ಕನಿಗೆ ಅವನ ಮಾತಿನ ವಿಚಾರವು ಹೊಳೆಯಿತು. ಪುನಃ ಮತ್ತೊಂದು ಸತ್ವ ಪರೀಕ್ಷೆಯನ್ನು ಕೊಡಬೇಕಾಯಿತು. ಕಿನ್ನರಿ ಬೊಮ್ಮಯ್ಯನು ಮಹಾ ಶಿವಶರಣನಾದರೂ ಅವಳ ಅಪೂರ್ವ ಸೌಂದರ್ಯಕ್ಕೆ ಮನಸೋತು ಅವಳನ್ನು ಮೋಹಿ

ಸಿದನು; ಮತ್ತು ತನ್ನ ಅಂತರಂಗವನ್ನು ಅವಳಿಗೆ ಕೂಡಲೆ ತಿಳಿಸಿಯೇ ಬಿಟ್ಟನು.

೪೪. "ನಿನ್ನ ಸ್ವರೂಪವ ಕಂಡೆನ್ನದೃಷ್ಟಿ ನಟ್ಟುದೆನಗೆ. ನಿನ್ನ ಲಾವಣ್ಯ ರಸವ ಕಂಡು ಮನ ಹಾರೈಸುತ್ತೆನಗೆ. ನಿನ್ನ ಪ್ರೌಢಿಯಿಂದ ಕೂಡಿಹೆನೆಂಬುದು ಭಾವದಲ್ಲಿ ಬಚ್ಚಬರಿಯ ಹೆಂಗುಸಾಗಿ ತೋರಿತ್ತೆನಗೆ. ಮಹಾಲಿಂಗ ತ್ರಿಪುರಾಂತಕನೆನಗೊಡ್ಡಿದ ಮಾಯೆಯು ನಿನ್ನ ಸಮ ಸುಖ ಕೂಟದೊಳಿರ್ದು ಶಿವಭಾವ ಭಕ್ತಿಯಂ ಗೆಲುವೆನು ಬಾರೌ ಹೆಣ್ಣೆ ಎಂದು ಕೈವಿಡಿದೆನು."

ಒಳ್ಳೆಯ ಸೊಗಸಾದ ಸನ್ನಿವೇಶ. ಬೆಳುದಿಂಗಳು ಅದೇ ಬಿದ್ದಿತ್ತು. ತಂಗಾಳಿಯು ಸೂಸುತ್ತಿತ್ತು. ಮಹಾದೇವಿಯಕ್ಕನಿಗೆ ಆತ್ಮಾನಂದವನ್ನು ಪಡೆಯುವ ವೇಳೆ. ಬೊಮ್ಮಯ್ಯನಿಗೆ ತನ್ನ ಕಾಮವಿಹಾರದ ಸಮಯ. ಅವನಿಗೆ ಇನ್ನೂ ಯಾರೂ ಬುದ್ಧಿ ಕಲಿಸಿದಂತೆ ಕಾಣಲಿಲ್ಲ. ಅವನ ಮೂಢತನಕ್ಕೆ ಮಹಾದೇವಿಯಕ್ಕನು—

೪೫. "ನೋಡುವ ಕಂಗಳಿಗೆ ರೂಪಿಂಬಾಗಿರಲು ನೀವು ಮನ ನಾಚದೆ ಬಂದಿರಣ್ಣಾ. ಕೇಳಿದ ಕಿವಿಯು ಸೊಗಸಿಗೆ ನೀವು ಮರುಳಾಗಿ ಬಂದಿರಣ್ಣಾ ನಾರಿಯೆಂಬ ರೂಪಿಂಗೆ ನೀವು ಒಲಿದು ಬಂದಿರಣ್ಣಾ. ಮೂತ್ರಬಿಂದು ಪೊಸರುವ ನಾಳವೆಂದು ಕಂಗಾಣದೆ ಮುಂದುಗೆಟ್ಟು ಬಂದಿರಣ್ಣಾ. ಬುದ್ಧಿಗೇಡಿತನದಿಂದ ಪರಮಾರ್ಥದ ಸುಖವ ಹೋಗಲಾಡಿಕೊಂಡು ಇದಾವ ಕಾರಣವೆಂದರಿಯದೆ ನೀವು ನರಕಹೇತುವೆಂದರಿದು ಮನ ಹೇಸದೆ ಬಂದಿರಣ್ಣಾ. ಚನ್ನಮಲ್ಲಿಕಾರ್ಜುನನಲ್ಲದೆ ಮಿಕ್ಕ ಪುರುಷರೆನಗೆ ಸಹೋದರರು ಛೀ ಹೋಗಾ ಮರುಳೇ"

ಎಂದು ಅವನನ್ನು ಚನ್ನಾಗಿ ಛೀ ಹಾಕಿದಳು. ಕಿನ್ನರಿ ಬೊಮ್ಮಯ್ಯನಿಗೆ ಸ್ವಲ್ಪ ಬುದ್ಧಿಯು ಅರುಹು ಬಂದಿತು; ಆದರೆ ಇನ್ನೂ ಮೋಹದ ತಾಪವು ಇಳಿದಿದ್ದಿಲ್ಲ. ಸ್ತಬ್ಧನಾಗಿ ನಿಂತುಬಿಟ್ಟನು. ಆಗ ಪುನಃ ಮಹಾದೇವಿಯಕ್ಕನು—

೪೬. "ಬಟ್ಟಹ ಮೊಲೆಯು, ಭರಜವ್ವನದ ಚಲುವ ಕಂಡು ಬಂದಿರಣ್ಣಾ. ನಾನು ಹೆಂಗೂಸಲ್ಲ, ನಾನು ಸೂಳೆಯಲ್ಲ, ಅಣ್ಣಾ ಮತ್ತೆ ನನ್ನನ್ನು ಕಂಡು ಕಂಡು ಆರೆಂದು ಬಂದಿರಣ್ಣಾ? ಚನ್ನಮಲ್ಲಿಕಾರ್ಜುನನಲ್ಲದೆ ಮಿಕ್ಕಿನ ಪರಪುರುಷನು ನಮಗಾಗದ ಮೊರೆ ನೋಡಣ್ಣಾ."

ಎಂದು ಅವನನ್ನು ತಿರಸ್ಕರಿಸಿದಳು.

ಮಹಾದೇವಿಯಕ್ಕನು ರೂಪದಲ್ಲಿ ಹೆಂಗಸು ಆದರೆ ಭಾವಿಸಿದೊಡೆ ಗಂಡು ರೂಪ. ಆತ್ಮಕ್ಕೆ ಹೆಣ್ಣು ಗಂಡು ಎಂಬ ಭೇದವಿಲ್ಲ ಎಂಬ ಅವಳ ಭಾವವು ತಿಳಿಯಲಿಲ್ಲ. ಅವನ ಕಾಮ ತಾಪವು ಮಿತಿಮೀರಿತು. ಅವನು ಚಂಚಲ ಮನಸ್ಸಿನವನಾಗಿ ಅವಳನ್ನು ಆಲಿಂಗಿಸಲು ಮೇಲೆ ಏರಿ ಹೋದನು. ಮಹಾದೇವಿಯಕ್ಕನು ಪರಮ ವೈರಾಗ್ಯಶಾಲಿನಿ, ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆದ ಯೋಗಿನಿ, ಮಹಾ ಶಿವಶರಣೆ ಅವಳು "ನಿನ್ನ ಮನಸ್ಸಿಗೆ ಬಂದಂತೆ ವರ್ತನಮಾಡು" ಎಂದು ನೆಲದ ಮೇಲೆ ಒಮ್ಮೆಲೇ ಬಿದ್ದು "ಚನ್ನಮಲ್ಲಿಕಾರ್ಜುನಾ" ಎಂದು ಕೂಗಿದಳು. ಅವಳು ಭಾವ ಸಮಾಧಿಯನ್ನು ಹೊಂದಿದಳು. ಬೊಮ್ಮಯ್ಯನು ಅವಳ ಶರೀರವನ್ನು ಮುಟ್ಟಿ—

೪೭. "ಮಸ್ತಕವ ಮುಟ್ಟಿ ನೋಡಿದರೆ, ಮನೋಹರನ ಉಳುಮೆ ಕಾಣ ಬಂದಿತ್ತು. ಮುಖಕಮಲವ ಮುಟ್ಟಿ ನೋಡಿದರೆ, ಮೂರ್ತಿಯ ಉಳಿವು ಕಾಣ ಬಂದಿತ್ತು. ಕೊರಳ ಮುಟ್ಟಿ ನೋಡಿದರೆ, ಗರಳಧರನಿರವು ಕಾಣಬಂದಿತ್ತು. ತೋಳು ಗಳ ಮುಟ್ಟಿ ನೋಡಿದರೆ ಶಿವನಪ್ಪು ಕಾಣಬಂದಿತ್ತು. ಉರಸ್ಥಲವ ಮುಟ್ಟಿ ನೋಡಿ ದರೆ, ಕರಸ್ಥಲದಂಗ ಕಾಣಬಂದಿತ್ತು. ಬಸುರ ಮುಟ್ಟಿ ನೋಡಿದರೆ, ಬ್ರಹ್ಮಾಂಡ ವಡಗಿ ಕಾಣಬಂದಿತ್ತು. ಗುಹ್ಯವ ಮುಟ್ಟಿ ನೋಡಿದರೆ, ಕಾಮದಹನ ಕಾಣ ಬಂದಿತ್ತು. ಮಹಾಲಿಂಗ ತ್ರಿಪುರಾಂತಕ ದೇವ, ಮಹಾದೇವಿಯಕ್ಕನ ನಿಲವ ನರಿಯದೆ ಅಳುಪಿ ಕೆಟ್ಟೆನು."

ಎಂದು ಪಶ್ಚಾತ್ತಾಪಬಟ್ಟು ನುಡಿದನು. ಈಗ ಅವನಿಗೆ ಮಹಾ ದೇವಿಯಕ್ಕನು ಸಾಕ್ಷಾತ್ ಪರಮಾತ್ಮನ ಸ್ವರೂಪವೆಂದು ಹೊಳೆಯಿತು. ಅವಳ ಪಾದಗಳಿಗೆ ಪೂಜ್ಯ ಭಾವನೆಯಿಂದ ವಂದಿಸಿದನು; ಮತ್ತು ಒಂದೇಸವನೆ ಕಣ್ಣೀರು ಸುರಿಸಹತ್ತಿದನು. ಅಷ್ಟರಲ್ಲಿ ಮಹಾದೇವಿಯಕ್ಕನು ಭಾವಸಮಾಧಿಯಿಂದ ಎಚ್ಚರಾಗಿ ಅವನನ್ನು ಈ ಪ್ರಕಾರ ಸೋದರ ಭಾವದಿಂದ ಸಮಾಧಾನ ಮಾಡಿದಳು.

೪೮. "ಎನ್ನಂತೆ ಪುಣ್ಯಗೆಯ್ದವರುಂಟೆ! ಎನ್ನಂತೆ ಭಾಗ್ಯಗೆಯ್ದವರುಂಟೆ! ಕಿನ್ನರನಂತಪ್ಪ ಸಹೋದರನೆನಗೆ, ಏಳೇಳು ಜನ್ಮದಲ್ಲಿ ಶಿವಭಕ್ತರೇ ಬಳಗವೆನಗೆ, ಚನ್ನಮಲ್ಲಿಕಾರ್ಜುನನಂತಪ್ಪ ಗಂಡ ನೋಡಾ ಎನಗೆ."

ಅವಳ ಧೀರ ವೈರಾಗ್ಯವನ್ನು ಕಂಡು ಅವನು ಬೆರಗಾದನು. ಅವಳು ಕಾಮ, ಕ್ರೋಧ ಮೊದಲಾದವುಗಳನ್ನು ಸಂಪೂರ್ಣವಾಗಿ ಗೆದ್ದವಳು. ಅಂಥವಳ ಮುಂದೆ ಕಾಮನ ಆಟವೇನು ನಡೆಯಬೇಕು? ಅವಳು ಬೊಮ್ಮಯ್ಯನಿಗೆ ತನ್ನ ವೈರಾಗ್ಯದ ಸ್ವರೂಪವನ್ನು ಹೀಗೆ ತಿಳಿಸುತ್ತಾಳೆ.

೪೯. "ಅಂಗದ ಭಂಗವ ಲಿಂಗ ಮುಖದಿಂದ ಗೆಲಿದೆ. ಮನದ ಭಂಗವ ಅರುಹಿನ ಮುಖದಿಂದ ಗೆಲಿದೆ. ಜೀವದ ಭಂಗವ ಶಿವಾನುಭವದಿಂದ ಗೆಲಿದೆ. ಕರಣದ ಕತ್ತಲೆಯ ಬೆಳಗನುಟ್ಟು ಗೆಲಿದೆ. ಜವ್ವನದ ಹೊರಮಿಂಚಿನಲ್ಲಿ ನಿಮ್ಮ ಕಂಗೆ ತೋರುವ ಕಾಮನ ಸುಟ್ಟುರುಹಿದ ಭಸ್ಮವ ನೋಡಯ್ಯ. ಚನ್ನಮಲ್ಲಿಕಾರ್ಜುನ ಕಾಮನ ಕೊಂದು ಮನಸಿಜನನುಳುಹಿದರೆ ಮನಸಿಜನ ತಲೆಬರಹವ ತೊಡೆವೆನು."

ಆಗ ಅವನಿಗೆ ಮಹಾದೇವಿಯಕ್ಕನ ಪ್ರಭಾವವು ಪೂರ್ಣ ತಿಳಿಯಿತು. ತಾನು ಮಾಡಿದುದು ಮಹಾ ಅಪರಾಧವೆಂದೂ ತಾನು ಮರುಳನೆಂದೂ ಬಿನ್ನವಿಸಿದನು. ಆಗ ಮಹಾದೇವಿಯಕ್ಕನು—

೫೦. "ಎಲೆ ಅಣ್ಣಾ ಎಲೆ ಅಣ್ಣಾ ನೀವು ಮರುಳರಲ್ಲಾ! ಅಣ್ಣಾ ಎನ್ನ ನಿನ್ನಳವೆ; ಹದಿನಾಲ್ಕು ಲೋಕವ ನುಂಗಿದ ಕಾಮನ ಬಾಣದ ಗುಣ ಎನ್ನ ನಿನ್ನಳವೇ? ಮಾರುವ ಮುಗ್ಗಿದಡೆ ಮಿಡಿಯು ಹರಿಯು ಹೊಯ್ಬರೇ? ಮುಗ್ಗಿದ ಭಂಗವ ಮುಂದೆ ರಣದಲ್ಲಿ ತಿಳಿವುದು. ನಿನ್ನ ನೀ ಸಂಹರಿಸಿ ಕೈದುವ ಕೊಳ್ಳಿರಣ್ಣಾ. ಚನ್ನಮಲ್ಲಿಕಾರ್ಜುನನೆಂಬ ಹಗೆಗೆ ಬೆಂಗೊಡದಿರಣ್ಣಾ"

ಎಂದು ಅವನ ಅಪರಾಧವನ್ನು ಕ್ಷಮಿಸುವಂತೆ ಸಮಾಧಾನಪಡಿಸಿದಳು. ಅವನು ವಯಸ್ಸಿನಲ್ಲಿ ಹಿರಿಯನಾದರೂ ಸಾಧನೆಯಲ್ಲಿ ಕಿರಿಯನಾದುದರಿಂದ ಅವನ ತಪ್ಪನ್ನು ಮನಸ್ಸಿನಲ್ಲಿ ಹಿಡಿಯದೆ ಸೋದರನಂತೆ ನಡಕೊಂಡಳು.

ಬೊಮ್ಮಯ್ಯನಾದರೂ ಮಹಾ ಶರಣ. ಆದರೆ ಕಾಲವಶಾತ್ ಕಾಮಬಾಧೆಗೆ ಒಳಗಾದನು. ಅಕ್ಕನ ವೈರಾಗ್ಯ ಜೀವನವನ್ನು ಕಂಡು ಅವಳಲ್ಲಿ ಪೂಜ್ಯಭಾವವನ್ನು ತಾಳಿ,

೫೧. "ಶರಣಾರ್ತಿ ಶರಣಾರ್ತಿ ಎಲೆ ನಮ್ಮವ್ವಾ, ಶರಣಾರ್ತಿ ಶರಣಾರ್ತಿ ಶರಣಾರ್ತಿ ಕರುಣಸಾಗರ ನಿಧಿಯೆ, ದಯಾಮೂರ್ತಿ ತಾಯೆ ಶರಣಾರ್ತಿ ಮಹಾಲಿಂಗ ತ್ರಿಪುರಾಂತಕನೊಡ್ಡಿದ ತೊಡಕು ನೀವು ಬಿಡಿಸಿದಿರಾಗಿ ನಿಮ್ಮ ದಯದಿಂದ ನಾನು ಹುಲಿ ನೆಕ್ಕಿ ಬದುಕಿದೆನು ಶರಣಾರ್ತಿ ಶರಣಾರ್ತಿ ತಾಯೆ."

ಎಂದು ತಾನು ಅವಳಿಂದ ಶುದ್ಧನಾದೆನೆಂದು ಬಿನ್ನವಿಸುವನು.

ಕಿನ್ನರಿ ಬೊಮ್ಮಯ್ಯನು ಅವಳ ವೈರಾಗ್ಯವನ್ನು ಪರೀಕ್ಷಿಸಬೇಕೆಂದು ಬಂದಿದ್ದರೂ ಅವಳನ್ನು ನೋಡಿದ ಕೂಡಲೆ ಅವಳ ಸೌಂದರ್ಯವು ಅವನ ಮನಸ್ಸನ್ನು ಸೆಳೆಯಿತು. ಹೀಗಾಗಿ ಅವನು ದುಡುಕಿದನು. ಆದರೂ ಅವಳ ವೈರಾಗ್ಯದ ಪ್ರಭಾವದಿಂದ ಪುನೀತನಾದನು. ಅವಳ ಸತ್ವಪರೀಕ್ಷೆಯಲ್ಲಿ ಪರಿಶುದ್ಧನಾದನು. ತಪ್ಪು ಮಾಡಿದರೂ ಅದನ್ನು ಅರಿತು ಒಪ್ಪಿಕೊಂಡು ಸನ್ಮಾರ್ಗ ಹಿಡಿದನು.

ತರುವಾಯ ಕಿನ್ನರಿ ಬೊಮ್ಮಯ್ಯನು ಪೂಜ್ಯಳಾದ ಮಹಾದೇವಿಯಕ್ಕನಿಗೆ ನಮಸ್ಕರಿಸಿ ಅವಳನ್ನು ಕರೆದುಕೊಂಡು ಕಲ್ಯಾಣ ನಗರಕ್ಕೆ ಹೊರಟನು. ಸ್ವಚ್ಛವಾದ ಬೆಳುದಿಂಗಳು ಬಿದ್ದುದರಿಂದ ಕಲ್ಯಾಣ ನಗರವು ಒಳ್ಳೆಯ ಶೋಭಾಯಮಾನವಾಗಿ ಭೂಸ್ವರ್ಗದಂತೆ ಕಂಗೊಳಿಸುತ್ತಿತ್ತು. ಅವಳು ಕಲ್ಯಾಣ ನಗರವನ್ನು ಕಂಡು—

೫೨. ಕಲ್ಯಾಣವೆಂಬುದಿನ್ನಾರಿಗು ಹೊಗಬಾರದು ಅಸಾಧ್ಯವಯ್ಯ, ಆಶೆ ಆಮಿಷವನಳಿದವಂಗಲ್ಲದೆ ಕಲ್ಯಾಣವತ್ತಲಡಿ ಇಡಬಾರದು. ಒಳಹೊರಗು ಶುದ್ಧವಾದವರಿಗಲ್ಲದೆ ಕಲ್ಯಾಣವ ಹೊಗಬಾರದು. ನಾನೆಂಬುದ ಹರಿದವಂಗಲ್ಲದೆ ಕಲ್ಯಾಣವ ಹೊಗಬಾರದು. ಒಳಗೆ ತಿಳಿದು ಚನ್ನಮಲ್ಲಿಕಾರ್ಜುನಂಗೊಲಿದು ಉಭಯ ಲಜ್ಜೆಯಳಿದೆನಾಗಿ ಕಲ್ಯಾಣವ ಕಂಡು ನಮೋ ನಮೋ ಎನುತಿರ್ದೆನು.”

ಎಂದು ಕಲ್ಯಾಣದ ಪವಿತ್ರತೆಯನ್ನು ಹೊಗಳಿ ಅದಕ್ಕೆ ಶರಣು ಮಾಡಿದಳು. ಕಿನ್ನರಿ ಬೊಮ್ಮಯ್ಯನು ಅವಳನ್ನು ಆ ದಿನ ಅಲ್ಲಿಯ ತ್ರಿಪುರಾಂತಕ ದೇವಾಲಯದಲ್ಲಿಳಿಸಿದನು. ಅವಳ ಶಿವಪೂಜೆಗೆ ಎಲ್ಲ ವ್ಯವಸ್ಥೆ ಮಾಡಿದನು. ಅವಳು ಅಲ್ಲಿ ತನ್ನ ಶಿವಪೂಜೆಯನ್ನು ಮುಗಿಸಿಕೊಂಡು ಪರಮಾತ್ಮನನ್ನು ಧ್ಯಾನಿಸುತ್ತ ಅಲ್ಲಿಯೇ ವಿಶ್ರಾಂತಿಯನ್ನು ಹೊಂದಿದಳು.

ಇತ್ತ ರಾತ್ರಿಯಲ್ಲಿಯೇ ಕಿನ್ನರಿ ಬೊಮ್ಮಯ್ಯನು ಬಸವೇಶ್ವರನ ಹತ್ತರ ಬಂದು ಮಹಾದೇವಿಯಕ್ಕನು ಆಗಮಿಸಿ ದೇವಾಲಯದಲ್ಲಿಳಿದುದನ್ನು ತಿಳಿಸಿದನು. ಮರುದಿನವೇ ಅವಳನ್ನು ಸ್ವಾಗತಿಸುವ ಕಾರ್ಯವು ನಡೆಯಿತು.

# ೫. ಶಿವಾನುಭವ ಮಂಟಪದಲ್ಲಿ

ಕಲ್ಯಾಣದಲ್ಲಿ ಶಿವಾನುಭವ ಮಂಟಪವು ಸುಪ್ರಸಿದ್ಧ ಶರಣರ ಕೂಟ ವಾಗಿತ್ತು. ಅಲ್ಲಿ ಭಕ್ತನಾದ ಬಸವೇಶ್ವರ, ಜ್ಞಾನಿಯಾದ ಚನ್ನಬಸವೇಶ್ವರ ವೈರಾಗ್ಯಮೂರ್ತಿಯಾದ ಅಲ್ಲಮಪ್ರಭು, ಕರ್ಮಯೋಗಿಯಾದ ಸಿದ್ಧ ರಾಮೇಶ್ವರ ಮೊದಲಾದ ಅನೇಕ ಶರಣರೂ, ಗಂಗಾದೇವಿ, ನೀಲ ಲೋಚನೆ, ಕಮಳವ್ವೆ, ವಿಮಳವ್ವೆ, ರೆಮ್ಮವ್ವೆ ಮೊದಲಾದ ಶಿವಶರಣೆ ಯರೂ, ಕೂಡಿ ಯಾವಾಗಲೂ ಆತ್ಮಜ್ಞಾನದ ಬಗ್ಗೆ ಚರ್ಚಿಸುತ್ತಿದ್ದರು. ಕೆಲವರು ಇನ್ನೂ ಸಾಧಕರಾಗಿದ್ದರು. ಅವರು ಸಿದ್ಧ ಪುರುಷರಾಗಿದ್ದ ಅಲ್ಲಮಪ್ರಭು ಮೊದಲಾದವರಿಂದ ಜ್ಞಾನಾಮೃತ ಹೊಂದುತ್ತಿದ್ದರು. ಅಲ್ಲಮಪ್ರಭುವೇ ಅನುಭವ ಮಂಟಪದ ಅಧ್ಯಕ್ಷರು. ಅವರ ನೇತೃತ್ವ ದಲ್ಲಿಯೇ ಎಲ್ಲ ಕಾರ್ಯಕಲಾಪಗಳು ನಡೆಯುತ್ತಿದ್ದವು. ಮಹಾದೇವಿ ಯಕ್ಕನು ಆಗಮಿಸಿದ ವೃತ್ತಾಂತವು ಎಲ್ಲರಿಗೂ ಗೊತ್ತಾಗಿದೆ. ಆದುದರಿಂದ ಆ ಪರಮ ವೈರಾಗ್ಯಶಾಲಿನಿಯಾದ ಮಹಾದೇವಿಯಕ್ಕನನ್ನು ಸ್ವಾಗತಿಸಲು ಎಲ್ಲರೂ ಹರ್ಷಭರಿತರಾಗಿದ್ದಾರೆ. ಅಲ್ಲಮಪ್ರಭುವು ತನ್ನ ಉಚ್ಚ ಪೀಠ ದಲ್ಲಿ ವಿರಾಜಮಾನನಾಗಿದ್ದಾನೆ. ಉಳಿದ ಶರಣರೂ, ಶಿವಶರಣರೂ, ತಮ್ಮ ತಮ್ಮ ಉಚಿತ ಆಸನಗಳಲ್ಲಿ ಕುಳಿತಿದ್ದಾರೆ. ಎಲ್ಲರಿಗೂ ಮಹಾ ದೇವಿಯಕ್ಕನನ್ನು ನೋಡುವ ಆಕಾಂಕ್ಷೆ ಬಹಳ.

ಮಹಾದೇವಿಯಕ್ಕನಿಗೂ ಶಿವಾನುಭವಮಂಟಪವನ್ನು ಸಂದರ್ಶಿಸಿ ಎಲ್ಲ ಶಿವಶರಣ ಶರಣೆಯರನ್ನು ಭೆಟ್ಟಿಯಾಗಿ ಅವರಿಂದ ಆತ್ಮ ಜ್ಞಾನ ವನ್ನೂ ಆತ್ಮ ಕಲ್ಯಾಣವನ್ನೂ ಪಡೆಯಬೇಕೆಂದು ಆಕೆಯ ಹಂಬಲ. ಅವರಲ್ಲಿ ಅವಳು ಬಸವೇಶ್ವರನ ಖ್ಯಾತಿಯನ್ನು ಮೊದಲೇ ಕೇಳಿದ್ದಳು. ಆದುದರಿಂದ ಅವನ ಮಹಾತ್ಮೆಯನ್ನು ಕೊಂಡಾಡುತ್ತ ಅಲ್ಲಿಯ ಭಕ್ತರಿಗೆ ಹೀಗೆ ಹೇಳುವಳು.

೫೧. "ಅಯ್ಯ ನಿಮ್ಮ ಶರಣರು ಮೆಟ್ಟಿದ ಧರೆ ಪಾವನವಯ್ಯ. ಅಯ್ಯ ನಿಮ್ಮ ಶರಣರು ಇದ್ದ ಪುರವೇ ಕೈಲಾಸವಯ್ಯ! ಅಯ್ಯ ನಿಮ್ಮ ಶರಣರು ನಿಂದುದೇ ನಿವಾಸವಯ್ಯ! ಚೆನ್ನಮಲ್ಲಿಕಾರ್ಜುನಯ್ಯ! ನಿಮ್ಮ ಶರಣ ಬಸವಣ್ಣನಿದ್ದ ಕ್ಷೇತ್ರ ಅವಿಮುಕ್ತ ಕ್ಷೇತ್ರ! ಎನು ಬಸವಣ್ಣನ ಶ್ರೀ ಪಾದಕ್ಕೆ ನಮೋ ನಮೋ ಎನುತಿರ್ದೆನು."

ಹೀಗೆ ಅನ್ನುತ್ತಾ ಬಸವೇಶ್ವರನ ಅರಮನೆಯನ್ನು ಸೇರಿ, ಪ್ರಭುದೇವ ಮೊದಲಾದ ಅಸಂಖ್ಯ ಶರಣರ ಸಂಗಡ ಇದ್ದ ಸಂಗನಬಸವಣ್ಣನನ್ನು ಕಂಡು—

೫೨. "ಅರಸಿ ತೊಳಲಿದರಿಲ್ಲ. ಬಯಸಿ ಹೊಕ್ಕರಿಲ್ಲ. ತಪಸ್ಸು ಮಾಡಿದರಿಲ್ಲ. ಅದು ತನ್ನ ಮಹಾ ಕಾಲಕ್ಕಲ್ಲದೆ ಸಾಧ್ಯವಾಗದು. ಶಿವನೊಲಿದಲ್ಲದೆ ಕೈಗೂಡದು. ಚೆನ್ನಮಲ್ಲಿಕಾರ್ಜುನನೆನಗೊಲಿದನಾಗಿ ನಾನು ಸಂಗನಬಸವಣ್ಣನ ಶ್ರೀ ಪಾದವ ಕಂಡು ಬದುಕಿದೆನು."

ಎಂದು ತನ್ನ ತಪಸ್ಸು ಫಲಿಸಲು ಸರಿಯಾದ ವೇಳೆ ಬೇಕೆಂದು ಹೇಳಿದಳು. ತರುವಾಯ ಮಹಾದೇವಿಯಕ್ಕನು ಬಸವೇಶ್ವರನ ಪಾದಗಳಿಗೆ ನಮಸ್ಕರಿಸಿ ಕೈಮುಗಿದು ನಿಲ್ಲಲು, ಬಸವೇಶ್ವರನು ಅವಳನ್ನು ಪ್ರಭುದೇವರಿಗೆ ತೋರಿಸುತ್ತ—

೫೩. "ಕಾಯದ ಲಜ್ಜೆಯ ಕಲ್ಪಿತವ ಕಳೆದು ಜೀವದ ಲಜ್ಜೆಯ ಮೋಹವನಳಿದು, ಮನದ ಲಜ್ಜೆಯ ನೆನಹು ಸುಟ್ಟು ಭಾವದ ಕೂಟ ಬತ್ತಲೆ ಎಂದರಿದು, ತವಕದ ಸ್ನೇಹ ವ್ಯವಹಾರಕ್ಕೆ ಹೋಗದು ಕೂಡಲ ಸಂಗಮದೇವಯ್ಯ ಎನ್ನ ಹೆತ್ತ ತಾಯಿ ಮಹಾದೇವಿಯಕ್ಕನ ನಿಲವ ನೋಡಯ್ಯ ಪ್ರಭುವೆ."

ಎಂದು ಅವಳ ವಿಷಯವಾಗಿ ತನಗಿದ್ದ ಅಪಾರವಾದ ಭಕ್ತಿ ಪ್ರೇಮವನ್ನು ತೋರಿಸಿದನು; ಮತ್ತು ಪುನಃ—

೫೪. "ರೂಹಿಲ್ಲದಂಗೆ ಒಲಿದವರಿಗೆ ತನುವಿನ ಹಂಗುಂಟೆ? ಮನವಿಲ್ಲದಂಗೆ ಮಚ್ಚಿದವರಿಗೆ ಅಭಿಮಾನದ ಹಂಗುಂಟೆ? ದಿಗಂಬರಗೆ ಒಲಿದವರಿಗೆ ಕೌಪೀನದ ಹಂಗುಂಟೆ? ಕೂಡಲ ಸಂಗಮದೇವಯ್ಯ ಮಹದೇವಿಯಕ್ಕನೆಂಬ ಭಕ್ತಿಗೆ ಅವ ಹೊರೆಯು ಇಲ್ಲ ನೋಡಾ ಪ್ರಭುವೆ."

ಎಂದು ಮಹಾದೇವಿಯಕ್ಕನ ಹಿರಿಮೆಯನ್ನು ತಿಳಿಸಿ ಹೇಳಿ ಆನಂದದಿಂದ ಇರುತ್ತಿರಲು, ಅಲ್ಲಮಪ್ರಭುವು ಅದನ್ನು ಕೇಳಿದನು. ಆದರೆ

ಅಲ್ಲಮಪ್ರಭುವು ಸಾಮಾನ್ಯ ಯೋಗಿಯೇ? ದೊಡ್ಡ ದೊಡ್ಡ ಭಕ್ತರನ್ನು ಶಿವಶರಣರನ್ನು, ಯೋಗಿಗಳನ್ನು ಸೂಕ್ಷ್ಮ ರೀತಿಯಿಂದ ಪರೀಕ್ಷಿಸಿ ಅವರಿಗೆ ಮೆಚ್ಚುತ್ತಿದ್ದನು. ಮಹಾದೇವಿಯಕ್ಕನು ಪರಮ ವೈರಾಗ್ಯವನ್ನು ತಾಳಿ ಬಂದರೂ ಶಿವಾನುಭವ ಮಂಟಪದಲ್ಲಿ ಎಲ್ಲ ಶಿವಶರಣರ ಎದುರಿಗೆ ಅಲ್ಲಮಪ್ರಭುವಿನ ಹಿರಿತನದಲ್ಲಿ ತನ್ನ ಸತ್ವಪರೀಕ್ಷೆಯನ್ನು ಕೊಡುವ ಪ್ರಸಂಗ ಬಂದಿತು. ಆದುದರಿಂದ ಅಲ್ಲಮ ಪ್ರಭುವು ಸುಮ್ಮನಿರದೆ ಅವಳಿಗೆ—

೫೫. ಉದಮದದ ಯೌವನವನೊಳಕೊಂಡು, ಸತಿ ಇತ್ತಲೇತಕ್ಕೆ ಬಂದೆಯವ್ವ! ಸತಿ ಎಂದರೆ ಮುನಿವರು ಎಮ್ಮ ಶರಣರು. ನಿಮ್ಮ ಪತಿಯ ಕುರುಹ ಹೇಳಿದರೆ ಬಂದು ಕುಳ್ಳಿರು, ಅಲ್ಲದಿರೆ ತೊಲಗು ತಾಯಿ ನಮ್ಮ ಗುಹೇಶ್ವರನ ಶರಣರಲ್ಲಿ ಸಂಗ ಸುಖ ಸನ್ನಿಹಿತವ ಬಯಸುವರೆ ನಿನ್ನ ಪತಿ ಯಾರೆಂಬುದು ಹೇಳಾ ಎಲೆ ಅವ್ವಾ."

ಎಂದು ಕೇಳಿದನು.

ಆಗ ಮಹಾದೇವಿಯಕ್ಕನು ಧೈರ್ಯಗುಂದದೆ ಶಾಂತ ಮನಸ್ಸಿನಿಂದ ತನ್ನ ಪತಿಯ ಕುರುಹನ್ನು ಹೇಳಿದಳು.

೫೬. "ಹರನೆ ನೀನೆನಗೆ ಗಂಡನಾಗಬೇಕೆಂದು ಅನಂತ ಕಾಲ ತಪಿಸಿದ್ದೆ ನೋಡಾ! ಹಸೆಯ ಮೇಲಣ ಮಾತ ಬೆಸಗೊಳಲಟ್ಟಿದರೆ, ಶಶಿಧರನ ಹತ್ತಿರ ಕಳುಹಿದರೆಮ್ಮವರು. ಭಸ್ಮವನೆ ಹೂಸಿ ಕಂಕಣವನೆ ಕಟ್ಟಿ ಚನ್ನಮಲ್ಲಿಕಾರ್ಜುನ ತನಗೆ ನಾನಾಗಬೇಕೆಂದು"

೫೭. ಪಚ್ಚೆಯ ನೆಲಗಟ್ಟು, ಕನಕದ ತೋರಣ, ವಜ್ರದ ಕಂಬ, ಪವಳದ ಚಪ್ಪರವನಿಕ್ಕಿ, ಮದುವೆಯ ಮಾಡಿದರೆಮ್ಮವರೆನ್ನ ಮದುವೆಯ ಮಾಡಿದರು. ಕಂಕಣ ಕೈದಾರೆ ಸ್ಥಿರ ಸೇಸೆಯನಿಕ್ಕಿ ಚನ್ನಮಲ್ಲಿಕಾರ್ಜುನನೆಂಬ ಗಂಡಗೆನ್ನ ಮದುವೆಯ ಮಾಡಿದರು."

೫೮. "ಗುರುವೇ ತೆತ್ತಿಗನಾದ, ಲಿಂಗವೇ ಮದುವಳಿಗನಾದ, ನಾನೇ ಮದುವಳಿಗೆಯಾದೆನು. ಈ ಭುವನವೆಲ್ಲರಿಯಲು ಅಸಂಖ್ಯಾತರೆನಗೆ ತಾಯಿ ತಂದೆಗಳು. ಕೊಟ್ಟರು ಪ್ರಭುವಿನ ಮನೆಗೆ ಸಾದೃಶವಪ್ಪ ವರನ ನೋಡಿ, ಇದು ಕಾರಣ ಚನ್ನಮಲ್ಲಿಕಾರ್ಜುನ ಗಂಡನೆನಗೆ. ಮಿಕ್ಕಿನ ಲೋಕದ ಗಂಡರೆನಗೆ ಸಂಬಂಧವಿಲ್ಲವಯ್ಯ ಪ್ರಭುವೆ."

ಮತ್ತು ತನ್ನ ವಿವಾಹದ ವಿವರವನ್ನು ವರ್ಣಿಸಿದಳು.

ಆದರೆ ಅಲ್ಲಮ ಪ್ರಭುವು ಕೌಶಿಕನ ಮೇಲೆ ಅಪರಾಧ ಹೊರಿಸಿದ ಬಗ್ಗೆ ಈ ಪ್ರಕಾರ ಕೇಳುವನು.

೫೯. "ತಪ್ಪ ಹೊರಿಸಿ ಹೊರಟೆನೆಂಬುದು ಸತ್ಯವೆ? ತನುಸಿರಿಯನಳಿದು ನಿರ್ಮಾಣವಾದಲ್ಲಿ ಮನವ ಭ್ರಾಂತು ನಿಶ್ಚಯವಾಗದು. ಕೇಶವೆಂಬ ಸೀರೆಯ ಅಂಗಕ್ಕೆ ಮರೆಯಾಯಿತ್ತು. ಅಪವಾದವೆಂತು ಹರಿಯಿತ್ತು. ಅದು ಗುಹೇಶ್ವರ ಲಿಂಗಕ್ಕೆ ಸಲ್ಲದ ವೇಷ."

ಆಗ ಮಹಾದೇವಿಯಕ್ಕನು ತನ್ನ ಅಂತರಂಗ ಶುದ್ಧವಾದ ಮೇಲೆ ಯಾವ ವೇಷವನ್ನು ಧರಿಸಿದರೇನು ಎಂಬುದನ್ನು ಹೀಗೆ ವಿವರಿಸುವಳು.

೬೦. "ಕಾಯ ಕರ್ರನೆ ಕಂದಿದರೇನಯ್ಯ? ಕಾಯ ಮಿರ್ರನೆ ಮಿಂಚಿದರೇನಯ್ಯ? ಅಂತರಂಗ ಶುದ್ಧವಾದ ಬಳಿಕ ಚನ್ನಮಲ್ಲಿಕಾರ್ಜುನ ಲಿಂಗವು ಒಲಿದ ಕಾಯವು ಹೇಗಿದ್ದಡೇನಯ್ಯ."

ಆಗ ಅಲ್ಲಮ ಪ್ರಭುವು ಹೀಗೆ ಉತ್ತರ ಕೊಡುತ್ತಾನೆ.

೬೧. "ದೇವನೊಲಿಯದೆ ನೀನೊಲಿಸಿದೆನೆಂಬುದು ಅದಾವುದಕ್ಕೆ? ಭಾವ ಶುದ್ಧವಾದಲ್ಲಿ ಸೀರೆಯನುಳಿದು ಕೂದಲ ಮರೆಮಾಡಲೇತಕ್ಕೆ? ಅದು ಅಂತರಂಗದ ನಾಚಿಕೆ ಬಾಹ್ಯದಲ್ಲಿ ತೋರಿತ್ತು. ಅದು ಗುಹೇಶ್ವರಲಿಂಗಕ್ಕೆ ಒಲವರವಲ್ಲ."

ಮಹಾದೇವಿಯಕ್ಕನು ಇದಕ್ಕೆ—

೬೨. "ಫಲ ಪಕ್ವವಾದಲ್ಲದೆ ಹೊರಗಣ ಸಿಪ್ಪೆ ಒಪ್ಪಗೆಡದು. ಕಾಮನ ಮುದ್ರೆಯ ಕಂಡು ನಿಮಗೆ ನೋವಾದಿತ್ತೆಂದು ಆ ಭಾವದಿಂದೆ ಮುಚ್ಚಿದೆ. ಇದಕ್ಕೆ ನೋವೇಕೆ? ಕಾಡದಿರಣ್ಣ. ಚನ್ನಮಲ್ಲಿಕಾರ್ಜುನ ದೇವರ ದೇವನ ಒಳಗಾದವಳ."

ಎಂದು ಒಳ್ಳೆಯ ಸಮರ್ಪಕವಾದ ಪ್ರತ್ಯುತ್ತರವನ್ನೀಯಲು ಅಲ್ಲಮ ಪ್ರಭುಗಳು ಬಹಳ ಸಂತೋಷಹೊಂದಿದರು. ಅವರ ನಡುವೆ ಆತ್ಮಜ್ಞಾನದ ಬಗೆಗೆ ಇನ್ನೂ ಕೆಲವು ಉದಾತ್ತ ವಿಚಾರಗಳುಳ್ಳ ಸಂಭಾ

ಷಣೆ ನಡೆಯಿತು. ಅಲ್ಲಮ ಪ್ರಭುಗಳು ಕೇಳಿದ ಪ್ರತಿಯೊಂದು ಪ್ರಶ್ನೆಗೆ ಸರಿಯಾದ ಉತ್ತರವನ್ನು ಸಮಾಧಾನದಿಂದ ಕೊಡುವಳು. ಇಂತಹ ಚರ್ಚೆಯಲ್ಲಿ ಅಲ್ಲಮ ಪ್ರಭುವಿಗೆ ಹೀಗೆ ಯಾವ ಶರಣರೂ ಸರಿಯಾದ ಉತ್ತಮ ಉತ್ತರವನ್ನು ಕೊಟ್ಟಿದ್ದಿಲ್ಲ. ಅವರು ಹೀಗೆ ಪರೀಕ್ಷಿಸಿ ಕೇಳಿದ್ದಕ್ಕೆ ಮಹಾದೇವಿಯಕ್ಕನು—

೬೩. "ಚಂದನವ ಕಡಿದು. ಕೊರೆದು, ತೇದಡೆ ನೊಂದೆನೆಂದು ಕಂಪ ಬಿಟ್ಟಿತ್ತೆ? ತಂದು ಸುವರ್ಣವ ಕಡಿದೊರೆದಡೆ ಬೆಂದು ಕಳಂಕ ಹಿಡಿದಿತ್ತೆ? ಸಂದು ಸಂದು ಕಡಿದು ಕಬ್ಬನು ತಂದು ಗಾಣದಲಿಕ್ಕಿ ಬೆಂದ ಪಾಕಗಳು ಸಕ್ಕರೆ ಯಾಗಿ ನೊಂದೆನೆಂದು ಸವಿಯ ಬಿಟ್ಟಿತ್ತೆ? ನಾ ಹಿಂದೆ ಮಾಡಿದ ಹೀನಂಗಳೆಲ್ಲವ ತಂದು ಮುಂದಿಳುಹಲು ನಿಮಗೆ ಹಾನಿಯೆ? ಎನ್ನ ತಂದೆ ಚನ್ನಮಲ್ಲಿಕಾರ್ಜುನ ದೇವಯ್ಯ ಕೊಂದಡೆ ಶರಣೆಂಬುದ ಮಾಣೆ."

ಎಂದು ತನ್ನ ವಿನಯಭಾವವನ್ನು ತೋರಿಸುವಳು. ಅಲ್ಲಮಪ್ರಭುವು ಅವಳ ನಿಜವಾದ ವಿರಕ್ತಿಯನ್ನು ಕಂಡು ಬಹಳ ಕೊಂಡಾಡುವನು. ಅವಳು ಅವರೆಲ್ಲರ ಸಂಗದಿಂದ ತನಗುಂಟಾದ ಪರಮಾನಂದವನ್ನೂ ಮನದ ಶುದ್ಧಿಯನ್ನೂ ಹೀಗೆ ವಿವರಿಸುವಳು.

೬೪. "ಎನ್ನ ತನು ಶುದ್ಧವಾಯಿತ್ತು ಶಿವಭಕ್ತರೊಕ್ಕುದಕೊಂಡು, ಎನ್ನ ಮನ ಶುದ್ಧವಾಯಿತ್ತು ಅಸಂಖ್ಯಾತರ ನೆನೆದು. ಎನ್ನ ಕಂಗಳು ಶುದ್ಧವಾಯಿತ್ತು ಸಕಲ ಪುರಾತನರ ನೋಡಿ. ಎನ್ನ ಶ್ರೋತ್ರ ಶುದ್ಧವಾಯಿತ್ತು ಅವರ ಕೀರ್ತಿಯ ಕೇಳಿ. ಎನ್ನ ಭಾವನೆ ಎನಗಿದು ಜೀವನವು ಕೇಳಾ ತಂದೆ. ನೆಟ್ಟನೆ ನಿಮ್ಮುವ ಪೂಜಿಸಿ ಭವಗೆಟ್ಟೆ ಕೇಳಾ ಚನ್ನಮಲ್ಲಿಕಾರ್ಜುನಾ."

ಮಹಾದೇವಿಯಕ್ಕನು ಮುಂದೆ ಶಿವಾನುಭವ ಮಂಟಪದಲ್ಲಿ ಇದ್ದು ಕೊಂಡು ಅಲ್ಲಿ ತನ್ನ ಉಚ್ಚ ವಿಚಾರಗಳನ್ನು ವ್ಯಕ್ತಗೊಳಿಸುತ್ತಿದ್ದಳು; ಆ ಶರಣರ ಸಂಗಡ ಇರುವಾಗ ತನಗುಂಟಾದ ಸೌಖ್ಯವನ್ನು ಹೀಗೆ ವರ್ಣಿಸಿದ್ದಾಳೆ.

೬೫. "ಆಡುವದು, ಪಾಡುವದು, ಕೇಳುವದು, ಹೇಳುವದು, ನಡೆವುದು, ನುಡಿವುದು ಸರಸ ಸಮ್ಮೇಳವಾಗಿಪ್ಪುದಯ್ಯ ಶರಣರೊಡನೆ. ಚನ್ನಮಲ್ಲಿಕಾರ್ಜುನಯ್ಯ,

ನೀ ಕೊಟ್ಟ ಆಯುಷ್ಯವುಳ್ಳನ್ನಕ್ಕರ. ಲಿಂಗ ಸುಖಿಗಳ ಸಂಗದಲ್ಲಿ ದಿನಂಗಳ ಕಳೆವೆನು."

ಅಲ್ಲಿ ಒಬ್ಬೊಬ್ಬರಿಂದ ತನಗೆ ದೊರೆತ ಪ್ರಸಾದದ ಸಂಗತಿಯನ್ನು ಈ ಪ್ರಕಾರ ಹೇಳಿದ್ದಾಳೆ. ಅವರಲ್ಲಿ ಮುಖ್ಯವಾಗಿ ಬಸವೇಶ್ವರನನ್ನು ಬಹಳ ಹೊಗಳಿದ್ದಾಳೆ.

೬೬. "ಕಾಮನ ಗೆಲಿದೆನಯ್ಯ ಬಸವಣ್ಣ ನಿಮ್ಮ ದಯದಿಂದ. ಸೋಮಧರನ ಹಿಡಿತಪ್ಪೆನಯ್ಯ ಬಸವಣ್ಣ ನಿಮ್ಮ ದಯದಿಂದ. ನಾಮದಲ್ಲಿ ಹೆಣ್ಣುರೂಪಲ್ಲದೆ ಭಾವಿಸಲು ಗಂಡು ರೂಪು ನೋಡಾ ಬಸವಣ್ಣ. ನಿಮ್ಮ ದಯದಿಂದ ಅತಿ ಕಾಮಿ ಚನ್ನಮಲ್ಲಿಕಾರ್ಜುನಂಗೆ ತೊಡರನಿಕ್ಕಿ ಕೂಡಿ ಎರಡರಿಯದೆ ಮರೆದೆನಯ್ಯ ಬಸವಣ್ಣ ನಿಮ್ಮ ದಯದಿಂದ."

೬೭. "ನಿಮ್ಮ ಅಂಗದ ಆಚಾರವ ಕಂಡು, ಎನಗೆ ಲಿಂಗಸಂಗವಾಯಿತ್ತು. ಅಯ್ಯ ಬಸವಣ್ಣ ನಿಮ್ಮ ಮನದ ಸುಜ್ಞಾನವ ಕಂಡು ಎನಗೆ ಜಂಗಮ ಸಂಬಂಧವಾಯಿತ್ತಯ್ಯ ಬಸವಣ್ಣ. ನಿಮ್ಮ ಸದ್ಭಕ್ತಿಯ ತಿಳಿದು ಎನ್ನ ನಿಜ ಸಾಧ್ಯವಾಯಿತ್ತಯ್ಯ ಬಸವಣ್ಣ. ಚನ್ನಮಲ್ಲಿಕಾರ್ಜುನನ ಹೆಸರಿಟ್ಟ ಗುರು ನೀನಾದ ಕಾರಣ ನಾನೆಂಬುದಿಲ್ಲವಯ್ಯ ಬಸವಣ್ಣ."

೬೮. "ಅಂಗದಲ್ಲಿ ಆಚಾರವ ತೋರಿದ. ಆಚಾರವೇ ಅಂಗವೆಂದರುಹಿದ. ಪ್ರಾಣದಲ್ಲಿ ಅರಿವ ನೆಲೆಗೊಳಿಸಿದ. ಆ ಅರಿವೆ ಜಂಗಮವೆಂದು ತೋರಿದ. ಚನ್ನಮಲ್ಲಿಕಾರ್ಜುನನ ಹೆತ್ತ ತಂದೆ ಸಂಗನಬಸವಣ್ಣನು ಎನಗೀ ಕ್ರಮವನರುಹಿದನಯ್ಯ."

ಎಂದು ಚನ್ನಬಸವೇಶ್ವರನನ್ನು ಹೊಗಳಿದ್ದಾಳೆ.

೬೯. "ಸಂಗದಿಂದಲ್ಲದೆ ಅಗ್ನಿಹುಟ್ಟದು. ಸಂಗದಿಂದಲ್ಲದೆ ಬೀಜ ಮೊಳೆದೋರದು. ಸಂಗದಿಂದಲ್ಲದೆ ದೇಹವಾಗದು. ಸಂಗದಿಂದಲ್ಲದೆ ಸರ್ವಸುಖದೋರದು. ಚನ್ನಮಲ್ಲಿಕಾರ್ಜುನದೇವಯ್ಯ ನಿಮ್ಮ ಶರಣರ ಅನುಭಾವ ಸಂಗದಿಂದ ನಾನು ಪರಮ ಸುಖಿಯಾಗಿ ಬದುಕಿದೆನಯ್ಯ ಪ್ರಭುವೆ."

ಎಂದು ಅಲ್ಲಮಪ್ರಭುವನ್ನು ಸ್ತುತಿಸಿದಳು.

ಕೊನೆಗೆ ಬಸವೇಶ್ವರ, ಚನ್ನಬಸವೇಶ್ವರ, ಪ್ರಭುದೇವರು, ಸಿದ್ಧ ರಾಮೇಶ್ವರ, ಮಡಿವಾಳಯ್ಯ ಮೊದಲಾದ ಏಳುನೂರೆಪ್ಪತ್ತು ಅಮರ ಗಣಂಗಳಿಂದ ಕೃತಾರ್ಥಳಾಗಿಹೆನೆಂದು ಬಿನ್ನೈಸುವಳು.

೭೦. "ಬಸವಣ್ಣನ ಮನೆಯ ಮಗಳಾಗಿ ಬದುಕಿದೆನಾಗಿ ತನ್ನ ಕರುಣ ಭಕ್ತಿ ಪ್ರಸಾದವ ಕೊಟ್ಟನು. ಚನ್ನಬಸವಣ್ಣನ ತೊತ್ತಿನ ಮಗಳಾದ ಕಾರಣ ಒಕ್ಕ ಪ್ರಸಾದವ ಕೊಟ್ಟನು. ಪ್ರಭುದೇವರ ತೊತ್ತಿನ ಮಗಳಾದ ಕಾರಣ ಜ್ಞಾನ ಪ್ರಸಾದವ ಕೊಟ್ಟನು. ಸಿದ್ಧರಾಮಯ್ಯನ ಶಿಶುವಿನ ಮಗಳಾದ ಕಾರಣ ಪ್ರಾಣಪ್ರಸಾದವ ಕರುಣಿಸಿ ಕೊಟ್ಟನು. ಮಡಿವಾಳ ಮಾಚಿ ತಂದೆಯ ಮನೆಯ ಮಗಳಾದ ಕಾರಣ ನಿರ್ಮಳ ಪ್ರಸಾದವ ನಿಶ್ಚಯಿಸಿ ಕೊಟ್ಟನು. ಇಂತೀ ಅಸಂಖ್ಯಾತರೆಲ್ಲರು ತಮ್ಮ ಕರುಣದ ಕಂದನೆಂದು ತಲೆದಡವಿ ರಕ್ಷಿಸಿದ ಕಾರಣ ಚನ್ನಮಲ್ಲಿಕಾರ್ಜುನನ ಪಾದಕ್ಕೆ ಯೋಗ್ಯಳಾದೆನು."

ಮಹಾದೇವಿಯಕ್ಕನು ಶಿವಾನುಭವ ಮಂಟಪದಲ್ಲಿ ತನ್ನ ಉದಾತ್ತ ವಿಚಾರಗಳಿಂದಲೂ ಪವಿತ್ರ ಜೀವನದಿಂದಲೂ ಎಲ್ಲ ಶಿವಶರಣರಿಂದ ಪೂಜ್ಯತೆಯನ್ನು ಹೊಂದಿದಳು. ಅವಳ ಘನತೆಯನ್ನು ಕುರಿತು ಅಲ್ಲಮ ಪ್ರಭುವು ಹೀಗೆ ಹೇಳಿದ್ದಾರೆ.

೭೧. "ಅಂಗೈಯ್ಯ ಲಿಂಗದಲ್ಲಿ ಕಂಗಳ ನೋಟ ಸ್ವಯವಾದ ಇರವ ನೋಡಾ. ತನ್ನ ಸ್ವಾನುಭಾವದ ಉದಯದಿಂದೆ ತನ್ನನರಿದ ನಿಜಶಕ್ತಿಯ ನೋಡಾ. ಭಿನ್ನವಿಲ್ಲದಿರವು ಮನ್ನಣೆಯ ಮಮಕಾರವ ಮೀರಿದ ಭಾವ ತನ್ನಿಂದ ತಾನಾದಳು. ನಮ್ಮ ಗುಹೇಶ್ವರ ಲಿಂಗದಲ್ಲಿ ಸಂದಿಲ್ಲದಿಪ್ಪ ಮಹಾದೇವಿಯಕ್ಕನ ನಿಲವಿಂಗೆ ನಮೋ ನಮೋ ಎನುತಿರ್ದೆ ಕಾಣಾ ಚನ್ನಬಸವಣ್ಣಾ."

ಆಗ ಚಿಕ್ಕದಣ್ಣಾಯಕರು ಪ್ರಸನ್ನಚಿತ್ತರಾಗಿ ಮಹಾದೇವಿಯಕ್ಕನನ್ನು ಹೀಗೆ ಸ್ತುತಿಸಿದರು.

೭೨. "ಅಜಕೋಟಿ ವರುಷದವರೆಲ್ಲರೂ ಹಿರಿಯರೇ? ಹುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲರು ಹಿರಿಯರೇ? ನಡುಮುರಿದು ಗುಡಗೂರಿ ತಲೆ ನಡುಗಿ ನೆರೆ ತೆರೆ ಹೆಚ್ಚಿ ಮತಿಗೆಟ್ಟು ಒಂದನಾಡಹೋಗಿ ಒಂಬತ್ತನಾಡುವ ಅಜ್ಞಾನಿಗಳೆಲ್ಲರು ಹಿರಿಯರೇ? ಅನವರಿದು ಘನವ ಬೆರಿಸಿ ಹಿರಿದು ಕಿರಿದೆಂಬ ಭೇದವ ಮರೆದ

ಕೂಡಲ ಚನ್ನಸಂಗಯ್ಯನಲ್ಲಿ ಬೆರಿಸಿ ಬೇರಿಲ್ಲದಿಪ್ಪ ಹಿರಿಯತನ ನಮ್ಮ ಮಹಾದೇವಿಯಕ್ಕಂಗಾಯಿತ್ತು."

ಅದೇ ಸಮಯಕ್ಕೆ ಸಿದ್ಧರಾಮೇಶ್ವರನು ಅವಳನ್ನು ಹೀಗೆ ಸ್ತುತಿಸುವನು.

೭೩. "ಅಹುದಹುದು ಮತ್ತೇನು? ಮರಹಿಂಗೆ ಹಿರಿದು ಕಿರಿದುಂಟಲ್ಲದೆ ಅರುಹಿಂಗೆ ಹಿರಿದು ಕಿರಿದುಂಟೆ ಹೇಳಯ್ಯ? ಸಾವಿಂಗೆ ಭಯ ಉಂಟಲ್ಲದೆ ಅಜಾತಂಗೆ ಭಯ ಉಂಟೆ ಹೇಳಯ್ಯ? ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ ಮಹಾದೇವಿಯಕ್ಕನ ನಿಲವಿಂಗೆ ಶರಣೆಂದು ಶುದ್ಧನಾದೆನು ಕಾಣಾ ಚನ್ನಬಸವಣ್ಣ."

ಮಹಾದೇವಿಯಕ್ಕನ ಉದಾತ್ತ ವಿಚಾರಗಳುಳ್ಳ ವಚನಗಳ ಮಹತ್ವವನ್ನು ಕುರಿತು ಚನ್ನಬಸವೇಶ್ವರನು

೭೪. "ಅಸ್ಮರೆ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ, ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ, ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ, ಅಜಗಣ್ಣನ ಐದು ವಚನಕ್ಕೆ ಕೂಡಲ ಚನ್ನಸಂಗಯ್ಯನಲ್ಲಿ ಮಹಾದೇವಿಯಕ್ಕಗಳ ಒಂದು ವಚನ ನಿರ್ವಚನ ಕಾಣಾ ಸಿದ್ಧರಾಮಯ್ಯ."

ಎಂದು ಮಾರ್ಮಿಕವಾಗಿ ಹೊಗಳಿದರು.

ಈ ರೀತಿಯಿಂದ ಪೂಜ್ಯತೆಯನ್ನು ಹೊಂದಿ ಮಹಾದೇವಿಯಕ್ಕನು ಶಿವಶರಣರ ಸನ್ನಿಧಾನದಲ್ಲಿ ಪರಮ ಸುಖದಾನಂದವನ್ನು ಪಡೆಯುತ್ತ ಕಾಲ ಕಳೆಯುತ್ತಿರಲು ಮುಂದೆ ವೀರಶೈವರಿಗೂ ಜೈನರಿಗೂ ಕಲಹವು ಉಂಟಾಗಲು ಶಿವಾನುಭವ ಮಂಟಪದ ಅಸ್ತಿತ್ವವು ಸಡಿಲಾಯಿತು. ಶಿವಶರಣರು ಅಲ್ಲಿ ನೆಮ್ಮದಿಯಾಗಿ ನೆಲಿಸಲು ಪರಿಸ್ಥಿತಿಯು ಚನ್ನಾಗಿ ಉಳಿಯಲಿಲ್ಲ. ಆಗ ಮಹಾದೇವಿಯಕ್ಕನು ಅಲ್ಲಮ ಪ್ರಭುವಿಗೆ ತನ್ನ ಲಿಂಗೈಕ್ಯದ ಸ್ಥಾನದ ಸ್ಥಿತಿಗತಿ ಯಾವುದೆಂದು ಬೆಸಗೊಳ್ಳಲು ಅಲ್ಲಮ ಪ್ರಭುವು ಅವಳಿಗೆ ಹೀಗೆ ಮಾರ್ಗದರ್ಶನ ಮಾಡುವನು.

೭೫. "ನೀ ನಾನೆಂಬುಭಯ ಸಂಗವಳಿದು, ತಾನು ತಾನಾದ ತ್ರಿಕೂಟ ವೆಂಬ ಮಹಾಗಿರಿಯ ತುತ್ತತುದಿಯ ಮೆಟ್ಟಿನೋಡಲು, ಬಟ್ಟಬಯಲು ಕಾಣ ಬಹುದು ನೋಡಾ! ಆ ಬಯಲ ಬೆರಸುವರೆ ತ್ರಿಕೂಟ ಗಿರಿಯೊಳಗೊಂದು ಕಾಣಬಾರದ ಕದಳಿಯುಂಟು ನೋಡಾ! ಆ ಕದಳಿಯ ಕಳದಲ್ಲಿ ಒಳಹೊಕ್ಕು ನೋಡಲು, ತೊಳಗಿ ಬೆಳಗುವ ಜ್ಯೋತಿಯುಂಟು ನೋಡಾ! ನಡೆಯಲ್ಲಿಗೆ ತಾಯೆ. ಗುಹೇಶ್ವರ ಲಿಂಗದಲ್ಲಿ ಪರಮ ಪದವಿ ಸ್ವಯವಹುದು ನೋಡಾ."

ಆಗ ಮಹಾದೇವಿಯಕ್ಕನು ಎಲ್ಲ ಶರಣರಿಗೆ ಬೀಳ್ಕೊಳ್ಳುವಾಗ ಹೀಗೆ ನುಡಿಯುತ್ತಾಳೆ.

೭೬. "ಒಡಲಿಲ್ಲದ, ನುಡಿಯಿಲ್ಲದ, ಕಡೆಯಿಲ್ಲದ, ನಲ್ಲನೊಡಗೂಡಿ ಸುಖಿ ಯಾದೆ ಕೇಳಿರಯ್ಯ. ಭಾಷೆ ಪೈಸರವಿಲ್ಲ. ಓಸರಿಸೆನಸ್ಸಕ್ಕೆ. ಆಶೆ ಮಾಡೆನು ಮತ್ತೆ ಭಿನ್ನಸುಖಕ್ಕೆ. ಆರಳಿದು ಮೂರಾಗಿ, ಮೂರಳಿದು ಎರಡಾಗಿ, ಎರಡಳಿದು ಒಂದಾಗಿ ನಿಂದೆನಯ್ಯ. ಬಸವಣ್ಣ ಮೊದಲಾದ ಶರಣರಿಗೆ ಶರಣಾರ್ಥಿ. ನಾನು ಮರೆಯಲಾಗ ದೆಂದು ನಾನು ನಿಮ್ಮ ಶಿಶುವೆಂದು ಎನ್ನನು ಚನ್ನಮಲ್ಲಿಕಾರ್ಜುನನ ಬೆರಸೆಂದು ಹರಸುತಿಹುದು."

೭೭. "ಹುಟ್ಟಿದೆ ಶ್ರೀ ಗುರುವಿನ ಹಸ್ತದಲ್ಲಿ. ಬೆಳೆದೆ ನಾನು ಅಸಂಖ್ಯಾತರ ಕರುಣದಿಂದೆ. ಭಾವವೆಂಬ ಹಾಲು, ಸುಜ್ಞಾನವೆಂಬ ತುಪ್ಪ, ಪರಮಾರ್ಥವೆಂಬ ಸಕ್ಕರೆಯನಿಕ್ಕಿದರು ನೋಡಾ! ಇಂತಪ್ಪ ತ್ರಿವಿಧಾಮೃತವನು ದಣಿಯಲೆರೆದು ಸಲುಹಿದಿರೆನ್ನ; ವಿವಾಹ ಮಾಡಿದಿರಿ; ಸಯವಪ್ಪ ಗಂಡಂಗೆ ಕೊಟ್ಟಿರಿ; ಕೊಟ್ಟ ಮನೆಗೆ ಕಳುಹಲೆಂದು ಅಸಂಖ್ಯಾತರೆಲ್ಲರು ನೆರೆದು ಬಂದಿರಿ; ಬಸವಣ್ಣ ಮೆಚ್ಚ ಲೊಗೆತನವ ಮಾಡುವೆ. ಚನ್ನಮಲ್ಲಿಕಾರ್ಜುನನ ಕೈವಿಡಿದು ನಿಮ್ಮ ತಲೆಗೆ ಹೂವ್ವ ತಾಹೆನಲ್ಲದೆ, ಹುಲ್ಲತಾರೆನವಧರಿಸಿ ನಿಮ್ಮಡಿಗಳೆಲ್ಲರು ಮರಳಿ ಬಿಜಯಂಗೈವುದು ಶರಣು ಶರಣಾರ್ಥಿ"

ಈ ಪ್ರಕಾರ ಮಹಾದೇವಿಯಕ್ಕನು ಬಸವೇಶ್ವರ ಚನ್ನಬಸವೇಶ್ವರ ಅಲ್ಲಮಪ್ರಭು ಮೊದಲಾದವರನ್ನು ಬೀಳ್ಕೊಂಡು ಕಲ್ಯಾಣಪುರದಿಂದ ಹೊರಟು ಶರಣರ ವಿಯೋಗದಿಂದ ಹೀಗೆ ಅನ್ನುವಳು.

೭೮. "ಅಯ್ಯ ನಿಮ್ಮ ಮಹಂತರ ಕೂಡಿದ ಸುಖವನುಪಮೆಗೆ ತರಬಾರದಯ್ಯ. ಅಯ್ಯ ನಿಮ್ಮ ಮಹಂತರ ಕೂಡೆ ಅಗಲುವ ಧಾವತಿಯಿಂದ ಸಾವುದೆ ಕರಲೇಸಯ್ಯ. ಚನ್ನಮಲ್ಲಿಕಾರ್ಜುನಯ್ಯ ನಿಜವನರಿದ ಮಹಿಮಾಮಹಿಮರೆನಗಲಿ ನಿಲಲಾರೆನಯ್ಯ."

ಮುಂದೆ ಮಹಾದೇವಿಯಕ್ಕನು ಶರಣರನ್ನು ಅಗಲಿದ ದುಃಖವನ್ನು ತಾನೇ ಸಮಾಧಾನ ಮಾಡಿಕೊಂಡು ಶ್ರೀಶೈಲ ಪರ್ವತದ ಕಡೆಗೆ ಸಾಗಿದಳು.






# ೬. ಶ್ರೀಶೈಲ ಪ್ರಯಾಣ

ಮಹಾದೇವಿಯಕ್ಕನು ಅಲ್ಲಮಪ್ರಭುಗಳ ಮಾರ್ಗದರ್ಶನದ ಮೇರೆಗೆ ಶ್ರೀಶೈಲ ಪರ್ವತದ ದಾರೀ ಹಿಡಿದಳು. ಇಲ್ಲಿಯಾದರೂ ಅವಳು ಏಕಾಕಿನಿ. ಮಾರ್ಗದಲ್ಲಿ ಯಾರೂ ಇಲ್ಲ. ಆದರೂ ಅವಳು ಧೈರ್ಯ ವುಳ್ಳವಳಾಗಿ ಪರಮಾತ್ಮನನ್ನು ಧ್ಯಾನಿಸುತ್ತ ಮುಂದೆ ಸಾಗುವಳು.

ಮುಂದೆ ಹೋಗುವಷ್ಟರಲ್ಲಿ ಕೆಲವು ಭಕ್ತರು ಭಜನೆ ಮಾಡುತ್ತ ಶ್ರೀಶೈಲಕ್ಕೆ ಹೋಗುತ್ತಿದ್ದು ಅವರನ್ನು ಕಂಡು ಓಡುತ್ತ ಹೋಗಿ ಕೂಡುವಳು. ತಾನೂ ಅವರ ಸಂಗಡ ಚನ್ನಮಲ್ಲಿಕಾರ್ಜುನನ ದರ್ಶನಕ್ಕೆ ಬರುತ್ತೇನೆಂದು ಹೇಳುವಳು. ಅವರು ಕಾವಿಯ ಬಟ್ಟೆಗಳನ್ನುಟ್ಟು, ಕೊರಳಲ್ಲಿ ಲಿಂಗ, ರುದ್ರಾಕ್ಷಿ ಮಾಲೆಗಳನ್ನು ಧರಿಸಿ, ಮೈಗೆಲ್ಲ ಭಸ್ಮ ವನ್ನು ಹಚ್ಚಿಕೊಂಡು ನಡೆದಿದ್ದರು. ಮಹಾದೇವಿಯಕ್ಕನಲ್ಲಿ ಅಂಥ ಬಾಹ್ಯ ಚಿನ್ಹಗಳಾವವೂ ಇಲ್ಲದ್ದನ್ನು ಕಂಡು "ನಾವು ಅಚ್ಚ ಪ್ರಸಾದಿಗಳು ನಿಚ್ಚ ಪ್ರಸಾದಿಗಳು ಇವಳೆಂಥ ಭಕ್ತಳು, ಭಕ್ತಿಯ ಶೀಲವಿಲ್ಲ, ಇವಳು ಭವಿಯು" ಎಂದು ಹೀಯಾಳಿಸುವರು. ಆಗ ಮಹಾದೇವಿಯಕ್ಕನು—

೬೯. ಅಯ್ಯಾ, ಶೀಲ ಶೀಲವೆಂತೆಂಬಿರಯ್ಯ? ಶೀಲದ ನೆಲೆಯ ಬಲ್ಲರೆ ಹೇಳಿರೋ. ಅರಿಯದಿರ್ದಡೆ ಕೇಳಿರೋ. ಕಾಮ ಒಂದು ಭವಿ, ಕ್ರೋಧ ಎರಡನೆಯ ಭವಿ, ಇಂತು ಲೋಭ, ಮೋಹ, ಮದ, ಮತ್ಸರ ಆಮಿಷ ಈ ಏಳು ಭವಿಗಳ ತಮ್ಮೊಳಗಿಟ್ಟುಕೊಂಡು ಲಿಂಗವಿಲ್ಲದವರ ಭವಿ ಭವಿ ಎಂಬರು. ತಮ್ಮ ಅಂತರಂಗದಲ್ಲಿದ್ದ ಲಿಂಗಾಂಗದ ಸುದ್ದಿಯನ್ನರಿಯದೆ ಅಚ್ಚ ಪ್ರಸಾದಿ, ನಿಚ್ಚ ಪ್ರಸಾದಿ, ಸಮಯ ಪ್ರಸಾದಿಗಳೆಂದು ಜಲಕ್ಕೆ ಕನ್ನವನಿಕ್ಕಿ ಉದಕವ ತಂದು ಲಿಂಗಕ್ಕೆ ಮಜ್ಜನಕ್ಕೆರೆವ ಹಗಲಗಳ್ಳರಿಗೆ ಮೆಚ್ಚುವನೆ ಚನ್ನಮಲ್ಲಿಕಾರ್ಜುನ"

ಎಂದು ಅವರಿಗೆ ನಿಜವಾದ ಭವಿಯು ಯಾರೆಂಬುದನ್ನು ಚನ್ನಾಗಿ ತಿಳಿಸಿಕೊಟ್ಟು ಒಬ್ಬಳೇ ಮುಂದೆ ಸಾಗುವಳು. ತರುವಾಯ ಅವಳು

ಪರಮಾತ್ಮನನ್ನು ಧ್ಯಾನಿಸುತ್ತ ತಲ್ಲೀನಳಾಗುವಳು. ಅವಳು ಈಗ ಸಂಪೂರ್ಣವಾಗಿ ಚನ್ನಮಲ್ಲಿಕಾರ್ಜುನನ ವಿಕಳಾವಸ್ಥೆಯಲ್ಲಿದ್ದು, ಮಹಾರಣ್ಯದಲ್ಲಿ ಸಂಚರಿಸಹತ್ತಿದಳು. ಆಗ ಅವಳು—

೮೦. "ಇಂದ್ರ ನೀಲದ ಗಿರಿಯನೇರಿಕೊಂಡು ಚಂದ್ರಕಾಂತದ ಶಿಲೆಯನಪ್ಪಿಕೊಂಡು ಕೊಂಬ ಬಾರಿಸುತ್ತ ಶಿವನೆ ನಿಮ್ಮ ನೆನೆವುತ್ತ ಎಂದಿಪ್ಪೆನೋ? ಅಂಗಭಂಗ ಮನಭಂಗವುಳಿದು ನಿಮ್ಮನೆಂದಿಗೆ ನೆರೆವೆನಯ್ಯ ಚನ್ನಮಲ್ಲಿಕಾರ್ಜುನಾ"

ಎಂದು ಪ್ರಾರ್ಥಿಸುವಳು; ಮತ್ತು

೮೧. "ಒಡಲ ಕಳವಳಕ್ಕಾಗಿ ಅಡವಿಯ ಪೊಕ್ಕೆ. ಗಿಡು ಗಿಡುವಪ್ಪದೆ ಬೇಡಿದೆನೆನ್ನಂಗಕ್ಕೆಂದು. ಅವು ನೀಡಿದವು ತಮ್ಮ ಲಿಂಗಕ್ಕೆಂದು. ಆನು ಬೇಡಿ ಭವಿಯಾದೆನು. ಅವು ನೀಡಿ ಭಕ್ತರಾದವು. ಇನ್ನು ಬೇಡಿದನಾದರೆ ಚನ್ನಮಲ್ಲಿಕಾರ್ಜುನಯ್ಯ ನಿಮ್ಮಾಣೆ."

ಎಂದು ಹೇಳುತ್ತ, ಅವಳು ಗಹನವಾದ ಅರಣ್ಯವನ್ನು ದಾಟುತ್ತ ಶ್ರೀಶೈಲ ಪರ್ವತವನ್ನೇರುತ್ತ ಹೀಗೆ ಅನ್ನುವಳು—

"೮೨. ಮೂಲದ್ವಾರದ ಬೇರ ಮೆಟ್ಟಿ ಭೂಮಂಡಲವನೇರಿದೆ; ಆಚಾರದ ಬೇರ ಹಿಡಿದು ಐಕ್ಯದ ತುದಿಯನ್ನೇರಿದೆ; ವೈರಾಗ್ಯದ ಸೋಪಾನದಿಂದೆ ಶ್ರೀಗಿರಿಯನೇರಿದೆ; ಕೈವಿಡಿದು ತೆಗೆದುಕೊಳ್ಳಾ ಚನ್ನಮಲ್ಲಿಕಾರ್ಜುನಾ"

ಮುಂದೆ ಶ್ರೀಗಿರಿಯನೇರಿ ಶಿವನೊಳಗೆ ಐಕ್ಯವಾಗಬೇಕೆಂದು ನೊಂದು ಹೀಗೆ ಬಿನ್ನೈಸುವಳು—

೮೩. "ಬೆರಸುವರೆ ಬೇಗ ತೋರಾ. ಹೊರಹಾಕದಿರಯ್ಯ! ನಿಮ್ಮಲ್ಲಿಗೆ ಸಲೆ ಸಂದ ತೊತ್ತಾನು. ಎನ್ನ ಹೊರಹಾಕದಿರಯ್ಯ! ಚನ್ನಮಲ್ಲಿಕಾರ್ಜುನಯ್ಯ, ನಿಮ್ಮ ನಂಬಿ ಬೆಂಬಳಿ ಬಂದೆನು, ಇಂಬುಗೊಳ್ಳಯ್ಯ."

ಹಾಗೆಯೇ ಅವಳು ಮುಂದೆ ಸಾಗಲು ಕದಳಿಯ ಬನವನ್ನು ಕಂಡು ಹೀಗೆ ಅಂದಳು—

೮೪. "ವನವೆಲ್ಲ ಕಲ್ಪತರು, ಗಿಡವೆಲ್ಲ ಮರುಜೀವಣಿ, ಶಿಲೆಗಳೆಲ್ಲ ಪರುಷ, ನೆಲನೆಲ್ಲ ಅವಿಮುಕ್ತ ಕ್ಷೇತ್ರ, ಜಲವೆಲ್ಲ ನಿರ್ಜರಾಮೃತ, ಮೃಗವೆಲ್ಲ ಪರುಷ,

ಎಡಹುವ ಹರಳಿಲ್ಲ ಚಿಂತಾಮಣಿ, ಚನ್ನಮಲ್ಲಿಕಾರ್ಜುನಯ್ಯನ ಮಚ್ಚಿನ ಗಿರಿಯ ಸುತ್ತಿ ನೋಡುತ್ತ ಬಂದು ಕದಳಿಯ ಬನವ ಕಂಡೆ ನಾನು"

ಈ ಪ್ರಕಾರ ಮಹಾದೇವಿಯಕ್ಕನು ಕದಳಿಯ ಬಾಗಿಲದಲ್ಲಿ ನಿಂತು ಕರಕಮಲದಲ್ಲಿ ಇಷ್ಟಲಿಂಗವನ್ನು ಜ್ಞಾನ ಪ್ರಭಾವದಿಂದ ಸ್ತುತಿಸುತ್ತಿರಲು ಅಂತರಂಗದ ಚಿತ್ಪ್ರಕಾಶವೇ ಹೊರಗೆ ಬಂದು ಜಂಗಮ ಸ್ವರೂಪವ ತಾಳಿ ಮುಂದೆ ಪ್ರಸನ್ನವಾಗಲು, ಮಹಾದೇವಿಯಕ್ಕನು—

೬೫. "ಹೊಳೆವ ಕೆಂಜೆಡೆಗಳ, ಮಣಿಮುಕುಟದ, ಒಪ್ಪುವ ಸುಲಿಪಲ್ಲ, ನಗೆ ಮೊಗದ ಕಂಗಳ ಕಾಂತಿಯಿಂ ಈರೇಳು ಭುವನಮಂ ಬೆಳಗುವ ದಿವ್ಯ ಸ್ವರೂಪನ ಕಂಡೆ ನಾನು! ಕಂಡೆನ್ನ ಕಂಗಳ ಬರ ಹಿಂಗಿತ್ತಿಂದು! ಗಂಡ ಗಂಡರೆಲ್ಲರ ಹೆಂಡರಾಗಿ ಆಳುವ ಗರುವನ ಕಂಡೆ! ನಾನು ಜಗದಾದಿ ಶಕ್ತಿಯೊಳು ಬೆರಸಿ ಮಾತನಾಡುವ ಪರಮ ಗುರು ಚನ್ನಮಲ್ಲಿಕಾರ್ಜುನನ ನಿಲವ ಕಂಡು ಬದುಕಿದೆನು"

ಈ ಪ್ರಕಾರ ಮಹಾದೇವಿಯಕ್ಕನು ಆ ಚರಮೂರ್ತಿಯನ್ನು ಕಂಡು ಸ್ತುತಿಸಿ, ನಮಸ್ಕಾರ ಮಾಡಿ ಹೀಗೆ ಬಿನ್ನಯಿಸಿದಳು—

೬೬. "ಎಲೆ ದೇವ, ಸಕಲ ಗಣಂಗಳುಪಟಳಕ್ಕಂಜಿ ನಿಮ್ಮ ಶರಣರ ಮರೆ ಹೊಕ್ಕೆ. ಅವರ ಕಾರುಣ್ಯಮಂ ಪಡೆದು ಬಂದು ನಿಮ್ಮ ಶ್ರೀಮೂರ್ತಿಯಂ ಕಂಡೆ ಇನ್ನು ಎನ್ನ ನಿಮ್ಮೊಳಗೆ ಐಕ್ಯವ ಮಾಡಿಕೊಳ್ಳಾ ಚನ್ನಮಲ್ಲಿಕಾರ್ಜುನಾ"

ಆಗ ಆ ಚಿತ್ಸ್ವರೂಪನಪ್ಪ ಜಂಗಮವು "ಭವಗೆಟ್ಟು ಬಂದೆಯಾ ಮಗಳೆ ಬಾ" ಎಂದು ತೆಗೆದು ಬಿಗಿದಪ್ಪಲು ಮಹಾದೇವಿಯಕ್ಕನು ಲಿಂಗೈಕ್ಯವಾಗುತ್ತ

೬೭. "ಕದಳಿ ಎಂಬುದು ತನು, ಕದಳಿ ಎಂಬುದು ಮನ, ಕದಳಿ ಎಂಬುದು ವಿಷಯಂಗಳು, ಕದಳಿ ಎಂಬುದ ಭವಘೋರಾರಣ್ಯ; ಕದಳಿ ಎಂಬುದ ಗೆದ್ದು, ಸಲೆ ಬದುಕಿ ಬಂದು, ಕದಳಿಯ ಬನದಲ್ಲಿ ಭವಹರನ ಕಂಡೆನು; ಭವಗೆಟ್ಟ ಮಗಳೆಂದು ಕರುಣದಿಂದ ತೆಗೆದು ಬಿಗಿದಪ್ಪಿದರೆ ಚನ್ನಮಲ್ಲಿಕಾರ್ಜುನನ ಹೃದಯ ಕಮಲದಲ್ಲಿ ಅಡಗಿದೆನು"

೮೮. “ಲಿಂಗವೆನ್ನೆ ಲಿಂಗೈಕ್ಯವೆನ್ನೆ, ಸಂಗವೆನ್ನೆ ನಿಸ್ಸಂಗವೆನ್ನೆ, ಆಯಿತೆನ್ನೆ ಆಗದೆನ್ನೆ, ನೀನೆನ್ನೆ ನಾನೆನ್ನೆ, ಚನ್ನಮಲ್ಲಿಕಾರ್ಜುನ ಲಿಂಗದಲ್ಲಿ ಘನಲಿಂಗೈಕ್ಯವಾದ ಬಳಿಕ ಮತ್ತೇನು ಎನಲೊಲ್ಲದೆ ಇದ್ದೆನು.”

ಹೀಗೆ ಹೇಳುತ್ತಿರಲು, ಅವಳ ಮಾತುಗಳು ಕೇಳದಂತಾಗಿ ಚನ್ನಮಲ್ಲಿಕಾರ್ಜುನನು ತನ್ನ ಹೃತ್ಕಮಲ ಮಧ್ಯದಲ್ಲಿ ಅಡಗಿಸಿಕೊಳ್ಳಲು ವಾರಿ ಕಲ್ಲು ವಾರಿಯ ಬೆರೆದಂತೆ, ಉಪ್ಪಿನ ಪೊಟ್ಟಣವು ಉದಕದಲ್ಲಿ ಬೈಚಿಟ್ಟಂತೆ, ಕ್ಷೀರ ಕ್ಷೀರವ ಬೆರೆದಂತೆ ಮಹಾದೇವಿಯಕ್ಕನು ನಿರವಯವಾದಳು.



# ೭. ಜೀವನ ವಿಮರ್ಶೆ

ಇಂತಹ ಉಜ್ವಲವಾದ, ಉದಾತ್ತವಾದ, ಪರಮ ಪವಿತ್ರವಾದ, ಧೀರ ಗಂಭೀರವಾದ, ತೇಜಃಪುಂಜವಾದ ಜೀವನದಿಂದ ಮಹಾದೇವಿಯಕ್ಕನು ಮಹಾ ಪುಣ್ಯಾತ್ಮಳಾಗಿ ಎಲ್ಲರಿಗೂ ಪರಮ ಪೂಜ್ಯಳಾಗಿದ್ದಾಳೆ. ಆಕೆಯ ಜೀವನದಲ್ಲಿ ಬ್ರಹ್ಮಚರ್ಯದ ತೇಜಸ್ಸು, ಓಜಸ್ಸೂ ಉಕ್ಕುತ್ತಿರುವವರಿಂದ ಅಂತಹ ಅವಳ ಪವಿತ್ರವಾದ ಹೃದಯದಿಂದ ಹೊರಹೊಮ್ಮಿದ ವಚನಗಳಲ್ಲಿಯಾದರೂ ಆ ತೇಜಸ್ಸೂ ಓಜಸ್ಸೂ ತುಂಬಿ ತುಳುಕುತ್ತವೆ. ಈ ತರದ ಜೀವನದಿಂದ ಅವಳು ಒಬ್ಬ ಪ್ರತಿಭಾಸಂಪನ್ನಳಾದ ರಸಿಕಳೂ ಆಗಿದ್ದಾಳೆ. ಅವಳ ದಿವ್ಯ ವಚನಗಳು ಕನ್ನಡ ಸಾಹಿತ್ಯದಲ್ಲಿ ದಿವ್ಯ ಅಮೃತದ ಬಿಂದುಗಳಂತೆ ಮಾಧುರ್ಯವನ್ನು ಒಳಗೊಂಡಿವೆ.

**"ಕಲಾಸುಂದರಿ ಬಹಿರಂಗದಲ್ಲಿ ತೇಜಸ್ವಿನಿ; ಅಂತರಂಗದಲ್ಲಿ ತಪಸ್ವಿನಿ."** ಎಂದು ಕರ್ನಾಟಕದ ಆಧುನಿಕ ಕವಿವರ್ಯರಾದ ಕೆ. ವಿ. ಪುಟ್ಟಪ್ಪನವರು ಹೇಳಿರುವದನ್ನು ನೋಡಿದರೆ ಮಹಾದೇವಿಯಕ್ಕನೂ ಸಹ ಕಲೋಪಾಸಕಳಾದ ತಪಸ್ವಿನಿಯು. ಆದರೆ ಕಲೋಪಾಸನೆಯನ್ನು ಮಾಡಬೇಕೆಂದು ಅವಳ ಉದ್ದೇಶವಿರಲಿಲ್ಲ. ಆದರೆ ಅವಳು ಕೈಕೊಂಡ ಉಜ್ವಲವಾದ ಜೀವನವೇ (ವಚನಗಳ ಮೂಲಕ) ಕಲೋಪಾಸನೆಯನ್ನು ಸಹಜವಾಗಿಯೇ ಮಾಡಿಸಿತು ಈ ಮಾತಿಗೆ ಅವಳ ಕಾವ್ಯಮಯ ವಚನಗಳೇ ಸಾಕ್ಷಿ. ಆಕೆಯ ಜೀ ವ ನ ವೆ ಲ್ಲ ಆಕೆಯ ವಚನಗಳಿಂದ ವ್ಯಕ್ತವಾಗುತ್ತದೆ. ಹೀಗೆ ಅವಳ ದಿವ್ಯ ವಚನಗಳು ಮತ್ತು ಉಜ್ವಲ ಜೀವನವು ಇವು ಎರಡೂ ಕೂಡಿ ಒಂದನ್ನೊಂದು ಅಗಲದಂತೆ ಗಂಗಾ ಯಮುನಾ ನದಿಗಳ ಪ್ರವಾಹಗಳ ಸಂಯೋಗದಂತೆ ಕೂಡಿಯೇ ಸ್ಫೂರ್ತಿಯಿಂದ ಹರಿಯುತ್ತವೆ. 'ಜೀವನವಿದ್ದಂತೆ ಸಾಹಿತ್ಯ, ಸಾಹಿತ್ಯದಂತೆ ಜೀವನ' ಎಂಬ ಮಾತು ಇಲ್ಲಿ ಸ್ಪಷ್ಟವಾಗಿ ಕಾಣುತ್ತದೆ. ಆಕೆಯ ವಚನಗಳು ತತ್ವಗರ್ಭಿತವೂ, ಅರ್ಥಗರ್ಭಿತವೂ ಮತ್ತು ಭಾವ ಗರ್ಭಿತವೂ ಇರು

ತ್ತವೆ. ಆಕೆಯು ಪರಮಾತ್ಮನ ಮೇಲೆ ಮೋಹವುಳ್ಳವಳಾಗಿ ಆತನನ್ನು ಕಾಣಲು ಇಚ್ಛಿಸಿ, ಹಲುಬಿ ಹಂಬಲಿಸಿ, ಬಳಲಿ ಬೆಂಡಾಗಿ ಮೊರೆಯಿಟ್ಟು ಕರೆಯುವವನ್ನೂ, ಮುಂದೆ ಒಮ್ಮೆ ಅವನ ದರ್ಶನವಾಯಿತೆಂದೂ ತೋರಿ ಸುವ ಅವಳ ಕೆಲವು ವಚನಗಳು **ಕವಿಸಾಮ್ರಾಟ್ ಡಾ. ರವೀಂದ್ರನಾಥ ಟಾಗೋರರ ಗೀತಾಂಜಲಿ** (Gitanjali) ಯೊಳಗಿನ ಕವನಗಳಿಗೆ ಹೋಲುತ್ತವೆ. ಬಸವೇಶ್ವರ ಮೊದಲಾದವರ ವಚನಗಳಂತೆ ಈಕೆಯು ವಚನಗಳಾದರೂ ಸರಳವಾದ ಸರಸವಾದ ಮೃದು ಮಧುರವಾದ ಶಬ್ದಗಳಿಂದ ಕೂಡಿ ಸಣ್ಣ ಸಣ್ಣ ವಾಕ್ಯಗಳಾಗಿ ಕಾವ್ಯಾಂಶಗಳಿಂದ ಕೂಡಿದ್ದರಿಂದ ಕಾವ್ಯಮಯವಾದ ಗದ್ಯದಲ್ಲಿದ್ದು ಕನ್ನಡ ಗದ್ಯ ಸಾಹಿತ್ಯಕ್ಕೆ ತಳಹದಿಯಾಗಿ ಇಡಿಯ ಕನ್ನಡ ಸಾಹಿತ್ಯದಲ್ಲಿ ಅಪೂರ್ವವಾದ ದಿವ್ಯ ಕಾಂತಿಯಿಂದ ಹೊಳೆಯುತ್ತವೆ. ಇವುಗಳನ್ನು ಓದುವಾಗ ಶಬ್ದ ಮಾಧುರ್ಯವು ಸಹಜವಾಗಿ ಹೊರಡುತ್ತದೆ. ಉಪಮೆಗಳ ಉಪ ಯೋಗದಲ್ಲಿ ಇವಳು ಕವಿ **ಕಾಲಿದಾಸನಿಗೆ** ಕಡಿಮೆಯುವಳೇನಲ್ಲ. ಈ ಎಲ್ಲ ಕಾರಣಗಳಿಂದ ಮಹಾದೇವಿಯಕ್ಕನಿಗೆ ಕನ್ನಡ ಸಾಹಿತ್ಯದಲ್ಲಿ ಒಂದು ವಿಶಿಷ್ಟ ಸ್ಥಾನವು ಅದೆ. ಮಾದರಿಗಾಗಿ ಇನ್ನೂ ಒಂದೆರಡು ವಚನಗಳನ್ನು ನೋಡಬಹುದು.

೮೯. "ನೆಲದ ಮರೆಯ ನಿಧಾನದಂತೆ, ಫಲದ ಮರೆಯ ರುಚಿಯಂತೆ, ಶಿಲೆಯ ಮರೆಯ ಹೇಮದಂತೆ, ತಿಲದ ಮರೆಯ ತೈಲದಂತೆ, ಭಾವದ ಮರೆಯ ಬ್ರಹ್ಮವಾಗಿಪ್ಪ ಚನ್ನಮಲ್ಲಿಕಾರ್ಜುನನ ನಿಲವನಾರು ಅರಿಯಬಾರದು"

೯೦. "ಅರಲುಗೊಂಡ ಕೆರೆಗೆ ತೆರೆ ಬಂದು ಹಾಯ್ವಂತೆ, ಬರಲುಗೊಂಡ ಸಸಿಗೆ ಮಳೆ ಸುರಿದಂತಾಯಿತ್ತು ನೋಡಾ. ಇದೆ ಎನಗೆ ಇಹದ ಸುಖ, ಪರದ ಗತಿ, ನಡೆದುಬಂದಂತಾಯಿತ್ತೆನಗೆ ಚನ್ನಮಲ್ಲಿಕಾರ್ಜುನನೆಂಬ ಗುರುಪಾದವ ಕಂಡು ಧನ್ಯಳಾದೆನು."

ಆಕೆಯ ವಚನಗಳ ಮಹತ್ವವನ್ನು ಅವಳ ಜೀವಮಾನದಲ್ಲಿಯೇ ಕಂಡ ಚನ್ನಬಸವೇಶ್ವರನು ಸಿದ್ಧರಾಮೇಶ್ವರರಿಗೆ ಹೇಳಿದ ಮಾತು ಆಕೆಯ ಮುಖಸ್ತುತಿಯಲ್ಲ; ಅತ್ಯುಕ್ತಿಯಲ್ಲ; ಆದರೆ ವಿಮರ್ಶಾತ್ಮಕ ವಿಚಾರಪೂರ್ವಕವಾದ ಅಭಿಪ್ರಾಯವು.

ಮಹಾದೇವಿಯಕ್ಕನು ವಿರಕ್ತಳಾಗಿ ತಪಸ್ವಿನಿಯಾದರೂ ಜೀವನವು ತುಚ್ಛವೆಂದವಳಲ್ಲ. ಈ ಜಗತ್ತು ಪರಮಾತ್ಮನದು; ಇದರ ಜೀವನವು ಪರಮಾತ್ಮನದು. ಆದುದರಿಂದ ಜೀವನದಲ್ಲಿ ನಮಗೆ ಆದರ ಗೌರವಗಳಿರ ಬೇಕು. ಜೀವನವು ಕೆಡುಕಲ್ಲ. ದೇಹವನ್ನೂ ಮನಸ್ಸನ್ನೂ ಪರಿಶುದ್ಧವಾ ಗಿಟ್ಟುಕೊಂಡು ಪೌರುಷದಿಂದಲೂ, ತೇಜಸ್ಸಿನಿಂದಲೂ ಯಾವಾಗಲೂ ಗಂಭೀರವಾದ ತುಂಬು ಜೀವನವನ್ನು ಜೀವಿಸಬೇಕೆಂಬ ಜೀವನೋತ್ಸಾಹವು ಅವಳ ದಿವ್ಯ ವಚನಗಳಿಂದಲೂ ಉಜ್ವಲವಾದ ಜೀವನದಿಂದಲೂ ಧ್ವನಿತವಾಗುತ್ತದೆ.



# ಗ್ರಂಥಾವಲೋಕನ



| | | |
|---|---|---|
| ೧. | ಮಹಾದೇವಿಯಕ್ಕನ ವಚನಗಳು, | ರಾ|| ಬ|| ಫ. ಗು. ಹಳಕಟ್ಟಿ |
| ೨. | ಶೂನ್ಯಸಂಪಾದನೆ. | ,, ,, |
| ೩. | ಮಹಾದೇವಿಯಕ್ಕನ ರಗಳೆ. | ಮಹಾಕವಿ ಹರಿಹರ |
| ೪ | ಅಕ್ಕಮಹಾದೇವಿ. | ಪ್ರೊ. ರಂ. ಶ್ರೀ. ಮುಗಳಿ |
| ೫. | ,, ,, | ಶ್ರೀ ಎಸ್. ವ್ಹಿ. ಪರಮೇಶ್ವರ ಭಟ್ಟ |
| ೬. | ,, ,, | ಶ್ರೀ ಟ್ಟಸ್ವಾಮಯ್ಯ |
| ೭. | | ಪಂಡಿತ ಎಚ್. ವೀರಭದ್ರಪ್ಪ |
| ೮. | ,, ,, ಯ ಆದರ್ಶ ಜೀವನ. | ಶ್ರೀ ನಾಗಭೂಷಣ ಶಾಸ್ತ್ರಿ |
| ೯. | ಅಕ್ಕನ ಚರಿತ್ರೆ. | ಶ್ರೀ ಕ. ಬ. ಅಂಗಡಿ |
| ೧೦. | ವೈರಾಗ್ಯನಿಧಿ ಅಕ್ಕಮಹಾದೇವಿ | ಓ. ಎನ್. ಲಿಂಗಣ್ಣಯ್ಯ |
| ೧೧. | ಮಹಾದೇವಿಯಕ್ಕ | ಪ್ರೊ. ಕೆ. ಜಿ. ಕುಂದಣಗಾರ |
| ೧೨. | ಅಕ್ಕನ ಬಾಳು | ಜ. ಪಂ. ಚನ್ನಬಸವರಾಜ ದೇಶಿಕೇಂದ್ರರು |
| ೧೩. | ವಚನಧರ್ಮಸಾರ. | ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿ |
| ೧೪. | ಕರ್ನಾಟಕ ಸಾಹಿತ್ಯ ಸಂಸ್ಕೃತಿ ದರ್ಶನ. | ಪ್ರೊ. ಎಸ್. ಎಸ್. ಮಾಳವಾಡ |
| ೧೫. | ಅಮರ ಜ್ಯೋತಿ–ಅಕ್ಕಮಹಾದೇವಿ. | ಶ್ರೀ ವ್ಹಿ. ಕೆ. ಕರಡಿ |
| ೧೬. | ಮಹದೇವಿಯಕ್ಕನವರು. | ಶ್ರೀ ಬಿ. ಬಿ. ಪಾಟೀಲ |
| ೧೭. | ಕಾವ್ಯದ ಕಣ್ಣು ಕವಿಯ ದರ್ಶನದಲ್ಲಿ. | ಕುವೆಂಪು |



ಶ್ರೀ ಶಿವಶಕ್ತಿ ಪ್ರಿಂಟಿಂಗ ಪ್ರೆಸ್, ಬಾಗಲಕೋಟ.